# ಹರಿದಾಸರು ಹೊಗಳಿ ಹಾಡಿದ ಶ್ರೀ ವಾದಿರಾಜರು

(ವಿಸ್ತಾರಿತ ದ್ವಿತೀಯ ಆವೃತ್ತಿ)



ಶ್ರೀ ವಾದಿರಾಜರು ತಾಯಿಗೆ ಕೊಟ್ಟ ತಮ್ಮ ಪ್ರತಿಮೆ

ಸಂಪಾದಕ

ಶ್ರೀನಿವಾಸ ಹಾವನೂರ

# ಹರಿದಾಸರು ಹೊಗಳಿ ಹಾಡಿದ

# ಶ್ರೀ ವಾದಿರಾಜರು

(ವಿಸ್ತಾರಿತ ದ್ವಿತೀಯ ಆವೃತ್ತಿ)

ಸಂಪಾದಕ

**ಶ್ರೀನಿವಾಸ ಹಾವನೂರ**

ಕೊನೆಯಲ್ಲಿರುವ ಒಪ್ಪೋಲೆಯ
ಪ್ರಕಾರ ತಿದ್ದಿಕೊಂಡು ಓದುವುದು

ಶ್ರೀ ವಾದಿರಾಜರ ಮೃತ್ತಿಕಾ ವೃಂದಾವನ ಮಠ,
ಹಾವನೂರ.
೨೦೧೦

**Haridasaru Hogali Haadida SHRI VAADIRAAJARU**
Ed. by Dr. Shrinivasa Havanur, Ashraya Apartments, No. 63, 2nd Floor, South Cross Road, Basavanagudi, Bangalore - 560 004. Ph: 080-41312187. Published by Sri Vadiraja Mruttika Vrundavana Mutt, Havanur, Haveri Dist.,



ಪ್ರಕಾಶಕರು :

**ಶ್ರೀ ವಾದಿರಾಜರ ಮೃತ್ತಿಕಾ ವೃಂದಾವನ ಮಠ**

ಹಾವನೂರ, ಹಾವೇರಿ ಜಿಲ್ಲೆ

ಪ್ರಕಟಣಾ ವರ್ಷ : ವಿಸ್ತಾರಿತ ದ್ವಿತೀಯ ಅವೃತ್ತಿ 2010

ಪುಟಗಳು : xxiv+188 = 212

ಬೆಲೆ : **ರೂ. 75/-**

ಕಾಗದ : 70 GSM ಮ್ಯಾಪ್‌ಲಿಥೋ

ಮುದ್ರಣ :

**ವರ್ತಮಾನ**

ನಂ. 1, ಶಿವಾನಂದ ನಗರ

ವಿಜಯ ಬ್ಯಾಂಕ್ ರಸ್ತೆ, ಮೂಡಲಪಾಳ್ಯ

ಬೆಂಗಳೂರು – 560 072.

✆ : 080–23305298, 9449002020



ಶ್ರೀ ವಾದಿರಾಜ ಗುರುವರೇಣ್ಯರ ಮೃತ್ತಿಕಾ ವೃಂದಾವನ, ಹಾವನೂರ.

# ಪ ರಿ ವಿ ಡಿ



ಅನುಬಂಧಗಳು

# SHRI SODE VĀDIRAJA MUTT

UDUPI - 576 101
UDUPI DIST. (KARNATAKA)
Phone : 0820- 2524004


110/09.10 | 28/1/2010

**ಶ್ರೀಹರಿಃ ಶರಣಂ ಸದಾ**

ಶ್ರೀಹರಿಯ ಕಾರುಣ್ಯವನ್ನು ಸಂಪಾದಿಸುವುದು ಮನುಷ್ಯ ಜೀವನದ ಪ್ರಮುಖ ಲಕ್ಷ್ಯವಾಗಿದ್ದು, ಅದಕ್ಕೆ ಗುರುಕಾರುಣ್ಯ ಪ್ರಧಾನವಾದ ಸೋಪಾನವಾಗಿದೆ. ಭಗವಂತನು ಅನುಗ್ರಹಿಸುವುದೇ ಗುರುಗಳ ಮೂಲಕ ಎಂಬುದಾಗಿ 'ಅಪ್ಯಚ್ಯುತೋ ಗುರುದ್ವಾರಾ ಪ್ರಸಾದಕೃತ್ ಅಹಮ್' ಇತ್ಯಾದಿ ಮಾತುಗಳು ಸ್ಪಷ್ಟಪಡಿಸಿವೆ.

ಅಂತಹ ಗುರುಗಳಲ್ಲಿ ಶ್ರೀಮದಾಚಾರ್ಯರಂತೆ ವಿರಾಜಮಾನರಾದವರು ಶ್ರೀಭಾವಿಸಮೀರರಾದ ಶ್ರೀವಾದಿರಾಜ ಗುರುಸಾರ್ವಭೌಮರು. ಇಂತಹ ಗುರುಗಳಲ್ಲಿ ಸ್ವರೂಪ ಮಹಿಮಾ ಪುರಸ್ಸರವಾಗಿ ಭಕ್ತಿಯನ್ನು ಮಾಡಿ, ಅವರ ಕಾರುಣ್ಯವನ್ನು ಸಂಪಾದಿಸಬೇಕು. ಗುರುಗಳು ಸಂತುಷ್ಟರಾದರೆ ಭಗವಂತ ಪ್ರಸನ್ನನಾದಂತೆಯೇ. ಭಗವಂತ ಪರಮಸಂತುಷ್ಟನಾದರೆ ಎಲ್ಲವೂ ದೊರೆತಂತೆಯೆ.

ಆದ್ದರಿಂದ ಗುರುಶ್ರೇಷ್ಠರಾದ ಶ್ರೀವಾದಿರಾಜ ಗುರುಸಾರ್ವಭೌಮರ ಕುರಿತಾಗಿ ಹಿಂದೊಮ್ಮೆ ಶ್ರೀಹರಿಗುರುಭಕ್ತರಾದ ಡಾ। ಶ್ರೀನಿವಾಸ ಹಾವನೂರರು ಬರೆದಿದ್ದು ಇದೀಗ ಎರಡನೆಯ ಆವೃತ್ತಿ ಹೊರಬರುತ್ತಿದೆ. ಶ್ರೀಯುತರು ಶ್ರೀಗುರುರಾಜರಲ್ಲಿ ವಿಶೇಷ ಶ್ರದ್ಧಾಭಕ್ತಿಸಂಪನ್ನರು; ಶ್ರೀವಾದಿರಾಜೀಯ ಕೃತಿಗಳ ಕುರಿತು ವಿಶೇಷವಾಗಿ ಅಧ್ಯಯನ ಮಾಡಿದವರು. ಪರಮಗುರುಗಳ ಕುರಿತು ಪುಸ್ತಕವನ್ನು ಬರೆದು ಮಹದುಪಕಾರವನ್ನು ಮಾಡಿದ್ದಾರೆ.

ಶ್ರೀಯುತರು ಈ ಕಾರ್ಯದಲ್ಲಿ ಯಶಸ್ವಿಗಳಾಗಲಿ; ಅದಕ್ಕೆ ಬೇಕಾದ ಆಯುರಾರೋಗ್ಯಾದಿ ಸಕಲ ಸಂಪತ್ತುಗಳನ್ನು ಶ್ರೀಹರಿಗುರುಗಳು, ಶ್ರೀಗುರುರಾಜರು, ಶ್ರೀಭೂತರಾಜರು ಅನುಗ್ರಹಿಸಲೆಂದು ನಾವು ವಿಶೇಷವಾಗಿ ಪ್ರಾರ್ಥಿಸುತ್ತೇವೆ.

ಶ್ರೀ ಶ್ರೀ ವಿಶ್ವವಲ್ಲಭ ತೀರ್ಥ ಶ್ರೀಪಾದಂಗಳವರು
ಶ್ರೀ ಸೋದೆ ವಾದಿರಾಜ ಮಠ ಉಡುಪಿ

ಉಡುಪಿ

ದಿನಾಂಕ : ೨೬-೦೧-೨೦೧೦

# ಕೃತಿ ಪರಿಚಯ

ಸುಮಾರು ೧೨ ವರ್ಷಗಳ ಹಿಂದೆ ಈ ಗ್ರಂಥವು ಮೊದಲ ಬಾರಿಗೆ ಪ್ರಕಟವಾಯಿತು. ಈಗಾಗಲೇ ಬೇರೆಯವರು ಪ್ರಕಟಿಸಿದ್ದ ಕೀರ್ತನೆಗಳನ್ನು ಅದರಲ್ಲಿ ಒಂದೆಡೆ ತಂದದ್ದಲ್ಲದೆ, ಬೇರೆ ಕೆಲವರು ನೋಟ್ ಬುಕ್ಕಿನಲ್ಲಿ ಬರೆದಿಟ್ಟಿದ್ದ ಹಾಡುಗಳನ್ನೂ ಅದರಲ್ಲಿ ಕೊಡಲಾಗಿತ್ತು. ಈಚೆಗೆ ಇಂಥವೇ ಇನ್ನೂ ಅಷ್ಟು ಕೀರ್ತನೆಗಳು ದೊರೆತವು. ಹಾಗೆ ದೊರೆತವುಗಳಲ್ಲಿ ಕೆಲವು ಅಪೂರ್ಣವಿದ್ದವು. ಇನ್ನು ಕೆಲವು ನೀರಸವಾಗಿ ಕಂಡವು. ಅಂತಹ ಹಲವನ್ನು ಕೈಬಿಟ್ಟು, ಒಟ್ಟಿನಲ್ಲಿ ಸುಮಾರು ೪೦ರಷ್ಟು ಸೇರಿಸಿ ಈ ಸಂಗ್ರಹವನ್ನು ತರಲಾಗಿದೆ.

ಇಲ್ಲಿರುವ ೧೪೮ ಹಾಡುಗಳ ರಚಯಿತರಲ್ಲಿ ಐದು ಸಂಸ್ಕೃತದಲ್ಲಿಯವನ್ನು ಬಿಟ್ಟರೆ ವಿಜಯದಾಸರು, ಪ್ರಸನ್ನ ವೆಂಕಟದಾಸರು, ಗೋಪಾಲದಾಸರು, ವೇಣುಗೋಪಾಲದಾಸರು ಹಾಗೂ ಜಗನ್ನಾಥವಿಠಲರು, ೧೮ನೆಯ ಶತಮಾನದವರಿದ್ದಾರೆ. ಉಳಿದವರೆಲ್ಲ ೧೯ ಮತ್ತು ೨೦ನೆಯ ಶತಮಾನದವರು. ಹೀಗೆ ಈಚಿನವರ ಕೃತಿಗಳೂ ಇಲ್ಲಿರುವವಾದ್ದರಿಂದ ಈ ಅಂಶವು ಶ್ರೀ ವಾದಿರಾಜರ ಮೇಲಿನ ಭಕ್ತಿವಿಶ್ವಾಸಗಳು ದಿನದಿನಕ್ಕೆ ಹೆಚ್ಚುತ್ತಲಿವೆ ಎನ್ನುವುದರ ಸ್ಪಷ್ಟ ಲಕ್ಷಣವಾಗಿದೆ.

ಆದರೆ ೧೯–೨೦ನೇ ಶತಮಾನದ ದಾಸರ ಹಾಡುಗಳು ರಚನೆಯಲ್ಲಿ, ಬಂಧದಲ್ಲಿ, ಹಿಂದಿನವರಿಗೆ ಹೋಲಿಸಿದಾಗ ಮೇಲ್ಮಟ್ಟದವಲ್ಲ ಎಂದು ಅನಿಸುವುದುಂಟು. ಇಷ್ಟೇ ಅಲ್ಲ. ಅಂಕಿತವಿಲ್ಲದ ಹಾಡುಗಳು ಕೀರ್ತನೆಗಳೇ ಅಲ್ಲ ಎಂದು ತಿಳಿಯುವವರಿದ್ದಾಗ ಅಂಥ ಅಂಕಿತರಹಿತ ಹಾಡುಗಳೂ ಶ್ರೀ ವಾದಿರಾಜರನ್ನು ಕುರಿತು ರಚಿತವಾಗಿದೆ.

ಹಿಂದಿನ ಕೀರ್ತನೆಗಳಲ್ಲಿ ದ್ವಿತೀಯ ಪ್ರಾಸ ತಪ್ಪದೇ ಬರುತ್ತದೆ. ಹಾಗೆ ನೋಡಿದರೆ ಅದು ಹಳಗನ್ನಡ ಕಾವ್ಯದ ಒಂದು ಆವಶ್ಯಕ ಲಕ್ಷಣವೇ ಆಗಿದ್ದು, ೧೯೧೦ರ ದಶಕದಿಂದ ಅಧಿಕೃತವಾಗಿ ಕೈಬಿಡಲಾಯಿತು. ಆದರೆ ೧೯ನೆಯ ಉತ್ತರಾರ್ಧದಲ್ಲಿಯೇ ಹಲವಾರು ಕೀರ್ತನೆಗಳಲ್ಲಿ ಈ ದ್ವಿತೀಯ ಪ್ರಾಸವನ್ನು ಕಾಣೆವು.

ಇದೆಲ್ಲ ಏನನ್ನು ತೋರಿಸುತ್ತದೆ? ಸೋದೆಗೆ ಹೋಗಿ ವೃಂದಾವನವನ್ನು ಸಂದರ್ಶಿಸಿದ ಮೇಲಾಗಲೀ, ಉಡುಪಿಯಲ್ಲಿ ಶ್ರೀ ವಾದಿರಾಜರ ಪ್ರಭಾವ

ಇಂದಿಗೂ ರಾರಾಜಿಸುತ್ತಿದ್ದುದ್ದನ್ನು ಕಂಡಾಗಲೀ ಗುರುಗಳನ್ನು ಕುರಿತ ಭಕ್ತಿಭಾವವು, Poetry is the outcome of spontaneous overflow of powerful feelings ಎಂದು ಹೇಳುವಂತ ತತ್ಕಾಲದಲ್ಲಿ ಸಹಜವಾಗಿ ಹೊರಹೊಮ್ಮಿದ್ದನ್ನು ಕಾಣುತ್ತೇವೆ. ಆಗೆಲ್ಲ ಶ್ರದ್ಧೆ, ಭಕ್ತಿಯೇ ಪ್ರಧಾನವಾಗಿದೆ, ಕಾವ್ಯಾಂಶಗಳು ಗೌಣವಾಗಿದ್ದರೂ ಅದು ಕ್ಷಮ್ಯ.

'ದ್ವಿತೀಯ ಪ್ರಾಸವನ್ನಂತೂ ಆಧುನಿಕ ಕಾವ್ಯರಚನೆಯಲ್ಲಿ ತರಬೇಕಾದದ್ದಿಲ್ಲ. ಅದರಿಂದ ಅರ್ಥಹಾನಿ, ಅನವಶ್ಯಕ ಶಬ್ದ ಪ್ರಯೋಗಗಳಾಗುತ್ತವೆ' ಎಂದು ಹೇಳಿ ಅನೇಕ ಹೊಸ ಕವಿಗಳು ಕೈಬಿಟ್ಟಿದ್ದಾರಷ್ಟೆ ರಾಷ್ಟ್ರಕವಿ ಎಂ. ಗೋವಿಂದ ಪೈಗಳು ಅಂಥವರಲ್ಲಿ ಆದಿಮರು. ಪಂಡಿತ ಮ.ಪ್ರ. ಪೂಜಾರರಂತಹ ಪ್ರಾಚ್ಯ ವಿದ್ವಾಂಸರು ಈ ವಿಷಯದಲ್ಲಿ ಉದಾಹರಣೆಗಳನ್ನು ಕೊಟ್ಟೇ, ಆ ಪ್ರಾಸವನ್ನು ಬಿಟ್ಟು ಕೊಡಬೇಕು ಎಂದಿದ್ದಾರೆ.

ಗಮನಿಸಬೇಕಾದ ಮಾತೆಂದರೆ ಹರಿದಾಸರು ಅದಕ್ಕೂ ೫೦ ವರ್ಷಗಳಷ್ಟು ಹಿಂದೆಯೇ ಅದನ್ನು ತ್ಯಜಿಸುವ ಸ್ವಾತಂತ್ರ್ಯವನ್ನು ತೋರಿದ್ದಾರೆ. ದಾಸರು, ಶ್ರಾದ್ಧ ನಿಯಮದಂತೆ ದ್ವಿತೀಯ ಪ್ರಾಸವನ್ನು ತರಲೇಬೇಕು, ಅದಕ್ಕಾಗಿ ಅನವಶ್ಯಕವಾದ ಹಾಗೂ ಅರ್ಥಕ್ಕೆ ಹೊಂದಿಕೊಳ್ಳದ ಶಬ್ದಗಳನ್ನು ಹಾಕಬೇಕು ಎಂದು ಬಗೆದವರಲ್ಲ.

ಪ್ರಕೃತ ಇಲ್ಲಿ ಕೊಟ್ಟ ವಾದಿರಾಜೀಯ ಕೀರ್ತನೆಗಳಲ್ಲಿ ಒಂದು ಬಗೆಯ ಸಮನ್ವಯವಿದೆ. ದ್ವಿತೀಯ ಪ್ರಾಸವು ತಾನಾಗಿ ಬರುವಂತಿದ್ದರೆ ಅದನ್ನು ಅವಶ್ಯವಾಗಿ ಕಾಣಿಸಿದ ನುಡಿಗಳೂ ಇಲ್ಲಿವೆ – ಆ ಪ್ರಾಸವಿಲ್ಲದವುಗಳ ಜೊತೆಗೆ.

ಈಚಿನ ಕೀರ್ತನೆಗಳಲ್ಲಿ ಕಾವ್ಯಗುಣ ಇಲ್ಲವೆಂದೇನೂ ಇಲ್ಲ.

'ಸತಿಯು ತಾ ತನ್ನ ಪತಿಯ ಕೂಡ ಹಿತವ ಬಯಸಿ
ಪತಿ ಬಂದು ಕರ ಪಿಡಿದು ಹಿತಿಸುವಾ ತೆರದಿ'

'ತಿಂಗಳಿನ ಬೆಳಕಿನಂತೆನ್ನ ಮನಮಂದಿರದಿ
ಸಂಗೀತ ಸುರಿಸುತಾನಂದದೀ'

– ಎಂಬಂತಹ ಉಕ್ತಿಗಳಿಂದಲೂ 'ಲಕ್ಷಿಸುತ್ತಲಿ ಲಕ್ಷ್ಮೀಪತಿ' ಎಂಬಂತಹ ಪ್ರಯೋಗಗಳಲ್ಲಿ ಕಂಡುಬರುವ ಅನುಪ್ರಾಸಗಳಿಂದಲೂ ಈ ಹೊಸ ಪದ್ಯಗಳು ಮನನೀಯವಾಗೇ ಇವೆ.

ಶ್ರೀ ವಾದಿರಾಜರನ್ನು ಮೊತ್ತಮೊದಲು ಪ್ರಸ್ತಾಪಿಸಿದ ಹರಿದಾಸರೆಂದರೆ ಅವರ ಸಮಕಾಲೀನರಾದ ವೈಕುಂಠದಾಸರು. ಬೇಲೂರ ಚೆನ್ನಕೇಶವನ ದರ್ಶನಕ್ಕೆ ಶ್ರೀ ವಾದಿರಾಜರು ಹೋದಾಗ ಅಲ್ಲಿದ್ದ ವೈಕುಂಠದಾಸರನ್ನು ಭೇಟ್ಟಿಯಾದರು. ಆಗ ದಾಸರ ತೊಡೆಯ ಮೇಲೆ ಕೇಶವಸ್ವಾಮಿ ಮಲಗಿದ್ದನ್ನು ಕಂಡು ವಾದಿರಾಜರು "ಇದೇನು ನಿಮ್ಮ ಲೀಲೆ?" ಎಂದು ಕೇಳಿದರಂತೆ, ಅದಕ್ಕೆ ಉತ್ತರವಾಗಿ ವೈಕುಂಠದಾಸರು –

"ಮಗುವು ಕಾಣಯ್ಯ ಮಾಯದ ಮಗುವು ಕಾಣಯ್ಯ
ಸುಗುಣ ವಾದಿರಾಜಾ ಸಕಳಾ ಜಗವನುರದದೊಳಿಂಬಿಟ್ಟ ...."

ಎಂದು ಹೇಳಿದರಂತೆ, ಇದೇ ದಾಸರ 'ಎಂಜಲೆನ್ನಲಿಬಹುದೆ ಮನುಜರಿದನಾ' ಎಂಬ ಹಾಡಿನಲ್ಲಿಯೂ ಶ್ರೀ ವಾದಿರಾಜರ ಪರೋಕ್ಷ ಪ್ರಸ್ತಾಪವಿದೆ.

'ಪುರಂದರದಾಸರೂ ಶ್ರೀ ವಾದಿರಾಜರನ್ನು ಹೊಗಳಿ ಕೀರ್ತನೆ ರಚಿಸಿದ್ದಾರೆ' – ಎಂಬುದಾಗಿ 'ಕಂಡೆ ಕಂಡೆ ರಾಜರ ಕಂಡೆ' ಎಂಬುದನ್ನು ಈ ಹಿಂದಿನ ಸಂಗ್ರಹಗಳಲ್ಲಿ ಕೊಟ್ಟಿದೆ. ಆದರೆ ಅದು 'ನಿಜಪುರಂದರ ವಿಠ್ಠಲೇಶ'ರೆಂಬ ಈಚಿನವರದು. ಇತ್ತ ದಾಸಶ್ರೇಷ್ಠರಾದ ಕನಕ–ಪುರಂದರರು ಶ್ರೀ ವಾದಿರಾಜರ ನಿಕಟ ಒಡನಾಟ ಇದ್ದವರೇ. ಆದರೂ ಅವರ ಹಾಡುಗಳು ಲಭ್ಯವಿಲ್ಲ. ಅರ್ಥಾತ್ ರಚಿಸಿದಂತಿಲ್ಲ.

**ಹಾಡುಗಳ ವರ್ಗೀಕರಣ**

ಇಲ್ಲಿಯ ಹಾಡುಗಳನ್ನು ತಾರತಮ್ಯಾನುಸಾರ ಹೊಂದಿಸಿದ್ದನ್ನು ಗಮನಿಸಬೇಕು. ಮೊದಲಿಗೆ ವಾದಿರಾಜರ ಉಪಾಸ್ಯದೇವತೆಗಳಾದ ಹಯಗ್ರೀವರು, ತ್ರಿವಿಕ್ರಮ ದೇವರುಗಳನ್ನು ಕುರಿತು ಬೇರೆ ದಾಸರುಗಳೇ ರಚಿಸಿದ ಸ್ತುತಿಗಳಿವೆ. ಅದರಂತೆ ಸೋದಾ ಕ್ಷೇತ್ರದ ಮಹಿಮೆಯ ಒಂದು ಹಾಡೂ ಇಲ್ಲಿ ಪ್ರಸ್ತುತವಾಗುತ್ತದೆ. ಇನ್ನೊಂದು ದೀರ್ಘವಾದ ಹಾಡಿನಲ್ಲಿ ಶ್ರೀ ವಾದಿರಾಜರ ಸಮಗ್ರ ಜೀವನದ ಇತಿವೃತ್ತವೇ ಮೂಡಿ ಬಂದಿದೆ. ಆದ್ದರಿಂದ ಅದನ್ನು ಇಲ್ಲಿಯ ಪವಣಿಸಲಾಗಿದೆ. (ರಚನೆ: ಉಡುಪಿಯ ಗಿರಿಬಾಲೆಯವರದು)

ಹಲವು ಜನ ಯತಿಗಳೇ ಶ್ರೀ ವಾದಿರಾಜರನ್ನು ಸ್ತುತಿಸಿದ್ದಾರೆ. ಅವರಲ್ಲಿ ಸೋದೆ ಮಠದವರೇ ಆದ ಶ್ರೀ ವಿಶ್ವೇಂದ್ರತೀರ್ಥರದು ಎದ್ದುಕಾಣುವ ಹೆಸರು. ಬೇರೆ ಮಠಗಳ ಎಂದರೆ ಸಾಗರಕಟ್ಟೆ ಪ್ರದ್ಯುಮ್ನತೀರ್ಥರದೂ ಒಂದು ಹಾಡು ನಮಗೆ ದೊರೆತಿದೆ. ಇತ್ತ ಸಂಸ್ಕೃತದಲ್ಲಿ ಶ್ರೀ ವಾದಿರಾಜರನ್ನು

ನಮಿಸಿದ ಶ್ರೀ ಸತ್ಯಧರ್ಮರು (ಉತ್ತರಾದಿ ಮಠ), ಶ್ರೀ ಸುಧೀಂದ್ರರು (ಶ್ರೀ ರಾಘವೇಂದ್ರರಿಗೆ ಗುರುಗಳು) – ಇವರ ಶ್ಲೋಕಗಳನ್ನೂ ಸುರುವಿಗೆ ಕೊಟ್ಟಿದೆ.

**ಮೊದಲಿಗರು**

ಶ್ರೀ ವಾದಿರಾಜರನ್ನು ಸ್ತುತಿಸಿದವರಲ್ಲಿ ಕಾಲಮಾನದಿಂದ ಪ್ರಸನ್ನವೆಂಕಟದಾಸರು ಮೊದಲಿಗರಾಗಿ ತೋರಬಹುದು. ಆದರೆ ಉತ್ತರ ಭಾಗದ ಕರ್ನಾಟಕದಲ್ಲಿ ಶ್ರೀ ವಾದಿರಾಜರ ಖ್ಯಾತಿಯನ್ನು ಹಾಡುಗಳ ಮೂಲಕ ಹರಡಿದವರೆಂದರೆ, ಪ್ರಸನ್ನವೆಂಕಟದಾಸರ ಸಮಕಾಲೀನರೇ ಆದ ಶ್ರೀ ವಿಜಯದಾಸರು. ಅನಂತರ ಅವರ ಶಿಷ್ಯ ಪ್ರಶಿಷ್ಯರಾದ ಗೋಪಾಲದಾಸರು, ಜಗನ್ನಾಥದಾಸರು, ವೇಣುಗೋಪಾಲದಾಸರು, ಬಾದರಾಯಣವಿಠಲರು, ಶ್ರೀದವಿಠಲರು, ಗುರುಜಗನ್ನಾಥವಿಠಲರು ಹಾಗೂ ಇನ್ನು ಕೆಲವರು, ಶ್ರೀ ವಾದಿರಾಜರನ್ನು ಸಂತತವಾಗಿ ಹೊಗಳಿ ಹಾಡಿದ್ದಾರೆ. ಇವರಲ್ಲಿಯೂ ಹೆಚ್ಚಿನವರು ಅಪರೋಕ್ಷ ಜ್ಞಾನಿಗಳೆಂಬುದನ್ನು ನೆನೆದಿರಬೇಕು. ಗಮನಿಸಬೇಕಾದ ಸಂಗತಿಯೆಂದರೆ ಇವರೆಲ್ಲ, ವಿಜಯದಾಸರು ನಂಬಿ ನುಡಿದ ಪ್ರಕಾರ ಶ್ರೀ ವಾದಿರಾಜರು ಭಾವಿಸಮೀರರೆಂಬುದನ್ನು ಹಲವು ಬಾರಿ ಪ್ರಸ್ತಾಪಿಸಿದ್ದಾರೆ. ಶ್ರೀ ವಾದಿರಾಜರ ಋಜುತ್ವ ವಿಚಾರದಲ್ಲಿ "ಹೊಡಿ ನಗಾರಿ ಮೇಲೆ ಕಡಕಡ" ಎಂಬಷ್ಟು ದೃಢನಿಶ್ಚಯ ಅವರದು. ವಿಶೇಷವೆಂದರೆ ವಿಜಯದಾಸರ ಪ್ರಶಿಷ್ಯರ ಶಿಷ್ಯರು ಎಂದರೆ ಇಪ್ಪತ್ತನೆಯ ಶತಮಾನದವರು ಸಹ ತಮ್ಮ ಹಾಡುಗಳಲ್ಲಿ ಈ ಭಾವಿಸಮೀರತ್ವವನ್ನು ಅಬಾಧಿತ ಸತ್ಯವೆಂಬಂತೆ ಋಜುಗಣ, ಲಾತವ್ಯ ಪದವಿ ಮುಂತಾದವನ್ನು ಮತ್ತೆ ಮತ್ತೆ ತಂದಿದ್ದಾರೆ.

ಹಿರಿಯ ತಲೆಮಾರಿನ ನಂತರದ ದಾಸರ ವಿಷಯ ಬಹುಮಟ್ಟಿಗೆ ಪರಿಚಿತವಾದದ್ದೇ. ಅವರಲ್ಲಿ ಅಭಿನವ ಜನಾರ್ದನ ವಿಠಲರ ಬಗ್ಗೆ ಇಲ್ಲಿ ತುಸು ಹೇಳಬೇಕು. ಸೋಮಪುರದ ಪ್ರೇಮದಾಸರೆಂದೂ ಅವರ ಖ್ಯಾತಿ. ಅವರು ರಚಿಸಿದ 'ತುಂಗಾತೀರದಿ ನಿಂತ ಸುಯತಿವರನ್ಯಾರೇ ಪೇಳಮ್ಮಯ್ಯ' ಎಂಬ ಹಾಡು ಅತ್ಯಂತ ಜನಪ್ರಿಯವಾದದ್ದು, ಅದೇ ಧಾಟಿಯನ್ನೆತ್ತಿಕೊಂಡು ಶ್ರೀ ವಾದಿರಾಜರನ್ನು ಕುರಿತು ಕೆಲವರು ಹಾಡಿದ್ದಾರೆ.

ಕಾಲಾನುಕ್ರಮವನ್ನು ಇಟ್ಟುಕೊಂಡೇ ಮುಂದಿನ ಹಾಡುಗಳನ್ನು ಇಲ್ಲಿ ಕೊಟ್ಟಿದೆ. ಅದರಿಂದ ತಿಳಿದುಬರುವ ಅಂಶವೆಂದರೆ ೧೭–೧೮ನೆಯ ಶತಮಾನಗಳಲ್ಲಿ ಆ ಸಂಖ್ಯೆ ೨೮ ಇದ್ದರೆ, ೧೯ನೆಯ ಶತಮಾನದಲ್ಲಿ ೩೦; ಹಾಗೂ ೨೦ನೆಯ ಶತಮಾನದಲ್ಲಿ ೬೦. ಇದು ಸಂಖ್ಯಾಮಾನದ ಹೆಚ್ಚಳ

ಮಾತ್ರ. ಭಾವಗರ್ಭಿತತೆ, ಪದಸೌಷ್ಟವ, ಈ ದೃಷ್ಟಿಯಿಂದ ನೋಡಿದರೆ ಹಿರಿಯ ತಲೆಮಾರಿನವರ ಹಾಡುಗಳು ಅದೆಷ್ಟೋ ಮೇಲು ಎನಿಸುತ್ತದೆ.

ಈಚಿನವರ ಕೃತಿ ರಚನೆಯಲ್ಲಿಯೂ ಮೌಲಿಕವಾದ ಕೆಲವು ಹಾಡುಗಳು ಇದ್ದೇ ಇವೆ. ಉದಾಹರಣೆಗೆ ಗುರುಗೋವಿಂದವಿಠಲ, ತಂದೆವೆಂಕಟೇಶವಿಠಲ, ಫಣಿಶಾಯಿವಿಠಲ – ಇವರ ಕೃತಿಗಳು. ಏನಿದ್ದರೂ ವಾದಿರಾಜ ಸ್ತುತಿಗವನದ ಪರಂಪರೆಯು ಇಂದಿಗೂ ಮುಂದುವರಿದಿದೆ. 'ಇಂದಿಗೂ' ಎಂದು ಹೇಳುವುದಕ್ಕೆ ಒಂದು ನಿದರ್ಶನ ಕೊಡಬಹುದು. ಶ್ರೀ ಅನಂತಸ್ವಾಮಿರಾವ್ ಎನ್ನುವ ದಾಸಸಾಹಿತ್ಯದ ಅಭ್ಯಾಸಿಗಳಿಗೆ ಈ ಹಸ್ತಪ್ರತಿಯನ್ನು ಪರಿಶೀಲನೆಗೆಂದು ಕೊಟ್ಟಾಗ ತಾವು 'ಅನಂತವಿಠಲ' ಎಂಬ ಮುದ್ರಿಕೆಯನ್ನು ಹಾಡುಗಳನ್ನು ರಚಿಸಿದ್ದಾಗಿಯೂ, ಅವುಗಳಲ್ಲಿ ಎರಡು ಶ್ರೀ ವಾದಿರಾಜ ಗುರುಗಳನ್ನು ಕುರಿತು ಇರುವುದಾಗಿಯೂ ಹೇಳಿದರು. ಅವನ್ನು ಇಲ್ಲಿ ಸೇರಿಸಿಕೊಂಡಿದೆ.

**ಕೆಲವು ವಿಶಿಷ್ಟ ರಚನೆಗಳು**

ಹರಿದಾಸರ ಹಾಡುಗಳೆಂದರೆ ಪಲ್ಲವಿ, ಅನುಪಲ್ಲವಿ, ಅನಂತರ ೩, ೫, ೯ .... ಈ ರೀತಿಯ ವಿಷಮ ಸಂಖ್ಯೆಯ ನುಡಿಗಳಿರುವ ಪದ್ಯಗಳು. ಈ ಬಗೆಯನ್ನುಳಿದು 'ದಂಡಕ' ಪ್ರಕಾರದ ಹಾಡುಗಳನ್ನೂ ಹರಿದಾಸರು ರಚಿಸಿದ್ದಾರಷ್ಟೆ. ಶ್ರೀ ವಾದಿರಾಜರನ್ನು ಕುರಿತು ಇಂಥವೂ ಕೆಲವಿವೆ. ದಂಡಕದಲ್ಲಿ ಸಾಲು, ಇಲ್ಲವೆ ನುಡಿಗಳ ಮಿತಿ – ಇರುವುದಿಲ್ಲ. ಅಂತ್ಯಪ್ರಾಸ ಇರುತ್ತದೆ. ವಿಶೇಷತಃ ಇಲ್ಲಿಯ ಹಾಡುಗಳಲ್ಲಿ 'ವಾದಿರಾಜ' 'ಗುರುರಾಜ' 'ವೃಂದಾವನ' ಇಂಥ ಶಬ್ದ ಕೊನೆಯಲ್ಲಿ ತಪ್ಪದೇ ಬರುವುದರಿಂದ ಭಜನೆ ಮಾಡುವ ದೃಷ್ಟಿಯಿಂದ ಅನುಕೂಲವಾದವುಗಳು. ಅವನ್ನು ಸಾಮೂಹಿಕವಾಗಿ ಹೇಳಿದರೆ ಇನ್ನಷ್ಟು ಫಲಪ್ರದವೆನಿಸಬಹುದು. ಇಂಥವನ್ನು ಪ್ರತ್ಯೇಕವಾಗಿ ಕೊಡಲಾಗಿದೆ.

ಮಂಗಳಾನ್ವಿತ ಪದ್ಯಗಳೂ ಒಂದು ವಿಶೇಷ ರೀತಿಯವೇ. ಹೆಣ್ಣುಮಕ್ಕಳು ಆರತಿ ಮಾಡುವಾಗ ಇವನ್ನು ಹೇಳುವುದಕ್ಕೆ ಅನುಕೂಲವಾಗಲೆಂದು ಪ್ರತ್ಯೇಕವಾಗಿ ಕೊಟ್ಟಿದೆ.

ಭೂತರಾಜರು! ಅವರಿಲ್ಲದೆ ಗುರುಕೃಪೆಯೆಂಬುದಿಲ್ಲ. ನಮ್ಮ ಹಾಡುಗಳ ಹುಡುಕಾಟದಲ್ಲಿ ಭೂತರಾಜ ಸ್ತುತಿಪರ ಹಾಡುಗಳು ಕೆಲವು ದೊರೆತದ್ದರಿಂದ ಅವನ್ನೂ ಪ್ರತ್ಯೇಕವಾಗಿ ಕೊಟ್ಟಿದೆ.

ಇಲ್ಲಿ ಕೊಟ್ಟಿರುವ ಹರಿದಾಸರ ನೂರಾನಲ್ವತ್ತು ಹಾಡುಗಳಲ್ಲಿ ನಾಲ್ವರು ಮಹಿಳೆಯರಿದ್ದಾರೆ. ಅವರಲ್ಲಿ ಹರಪನಹಳ್ಳಿ ಭೀಮವ್ವ ('ಭೀಮೇಶಕೃಷ್ಣ') ಮೊದಲಿಗರು. 'ಕಾಳಿಮರ್ದನಕೃಷ್ಣ' ಮುದ್ರಿಕೆಯ ಕಳಸದ ಸುಂದರಮ್ಮ, 'ಪ್ರೇಮಕೃಷ್ಣ' (ಹೆಸರು ತಿಳಿಯದು) ಮುದ್ರಿಕೆಯುವರು ಹಾಗೂ 'ಶ್ರೀಮುದ್ದುವಿಠಲ' ಅಂಕಿತದ ಪಡಸಲಗಿ ರುಕ್ಮಿಣಿಬಾಯಿ–ಇವರುಗಳ ರಚನೆಗಳಲ್ಲಿ ಭಕ್ತಿಭಾವವೇ ಮುಖ್ಯವಾಗಿದೆ. ಹಾಂ! ಓರ್ವ ವೀರಶೈವ ದಾಸರೂ ಇದ್ದಾರೆ! ಅವರೇ ಬಾಳೆಹಳ್ಳಿ ರುದ್ರಾಕ್ಷಿ ಒಡೆಯರು. ಇವರ ಹಾಡನ್ನು ಮೊದಲಿಗೆ ಕೊಟ್ಟವರು ಗೊರಾಬಾಳರು. ಅದೆಲ್ಲಿಂದ ದೊರಕಿಸಿದರೊ! ಈ ರುದ್ರಾಕ್ಷಿ ಒಡೆಯರು ಯಾವ ಕಾಲದವರು? ಅವರಿಗೆ ಶ್ರೀ ವಾದಿರಾಜರ ಪ್ರಸ್ತಾವ ಬಂದದ್ದು ಹೇಗೆ? ಎಂಬುದು ಸೋಜಿಗದ ಅಂಶವೇ ಆಗಿದೆ.

**ಹಾಡುಗಳ ಸ್ಥೂಲಾವಲೋಕನ**

ಈ ಎಲ್ಲ ಹಾಡುಗಳ ಏಕಮೇವ ವಿಷಯವೆಂದರೆ ಶ್ರೀ ವಾದಿರಾಜರ ಮಹಿಮೆಯ ವರ್ಣನೆ. ಎಲ್ಲ ದಾಸರಿಗೆ ಶ್ರೀ ವಾದಿರಾಜರ ಜೀವನ ಚರಿತೆಯ ಬಗ್ಗೆ ಖಚಿತವಾದ ತಿಳಿವಳಿಕೆ ಇದೆ. ಅವರುಗಳು ತಮ್ಮ ಹಾಡುಗಳಲ್ಲಿ ಕಂಡರಿಸಿದ ಮುಖ್ಯ ಘಟನೆಗಳನ್ನು ಹೀಗೆ ಪಟ್ಟಿ ಮಾಡಬಹುದು:

* ಹೂವಿನಕೆರೆ ಗ್ರಾಮದ ರಾಮಾಚಾರ್ಯ, ಗೌರಿ ದಂಪತಿಗಳಿಗೆ ಮಗನಾಗಿ ಮನೆಯ ಹೊರಗಡೆ ಅವತರಿಸಿದುದು. ಆ ಪ್ರಯುಕ್ತ ಮಗುವನ್ನು ಉಪನಯನವಾದೊಡನೆ ವಾಗೀಶತೀರ್ಥರಿಗೆ ಒಪ್ಪಿಸಿಕೊಟ್ಟದ್ದು.
* ಈ ಭೂವರಹನು, ಶ್ರೀ ವಾದಿರಾಜತೀರ್ಥರಾದದ್ದು.
* ಸಂಚಾರತ್ವೇನ ತಿರುಪತಿಗೆ ಬಂದು, ಮಂಡಿಯಿಂದಲೇ ಬೆಟ್ಟವೇರಿದುದು. ಗಂಡಕೀ ನದಿಯಿಂದ ತಂದಿದ್ದ ಸಾಲಿಗ್ರಾಮಗಳ ಹಾರವನ್ನು ಶ್ರೀನಿವಾಸ ದೇವರಿಗೆ ಅರ್ಪಿಸಿದ್ದು.
* ತಾಯಿಯುದರಕೆ ಹೊತ್ತಿದ್ದ ಲಕ್ಷಾಭರಣವನ್ನು ಪೂರೈಸಿದ್ದು.
* ವಿಜಯನಗರದ ಅರಸು ವೆಂಕಟಪತಿ ರಾಜನು 'ಪ್ರಸಂಗಾಭರಣತೀರ್ಥ' ಎಂಬ ಬಿರುದನ್ನಿತ್ತು ಸನ್ಮಾನಿಸಿದುದು.
* ಮಗನ ದರ್ಶನ ತಪ್ಪುತ್ತದೆಂದು ತಾಯಿ ದುಃಖಿಸಿದಾಗ ತಮ್ಮ ಕಂಚಿನ ಮೂರ್ತಿಯನ್ನು ಸ್ವಯಂ ನಿರ್ಮಿಸಿ ತಾಯಿಗೆ ಕೊಟ್ಟದ್ದು.

(ಅದೇ ಮೂರ್ತಿಯ ಚಿತ್ರವನ್ನೇ ಈ ಪುಸ್ತಕದ ಮುಖಪುಟದಲ್ಲಿ ಕೊಟ್ಟಿದೆ).

* ಪುಣೆಯಲ್ಲಿದ್ದಾಗ 'ರುಕ್ಮಿಣೀಶ ವಿಜಯ'ವನ್ನು ರಚಿಸಿ, ಮಾಘಕಾವ್ಯಕ್ಕಿಂತಲೂ ಶ್ರೇಷ್ಠವೆಂಬುದನ್ನು ಮನಗಾಣಿಸಿದಾಗ, ಆನೆಯ ಮೇಲೆ ಈ ಕೃತಿಯ ಮೆರವಣಿಗೆ ಮಾಡಿಸಿದ್ದುದು.
* ಉಡುಪಿಯ ಪರ್ಯಾಯವನ್ನು ಎರಡು ತಿಂಗಳಿನಿಂದ ಎರಡು ವರ್ಷಕ್ಕೆ ಬದಲಿಸಿದ್ದು.
* 'ಲಕ್ಷ್ಮೀಶೋಭಾನ' ಹಾಡಿನಿಂದ ಹಾವು ಕಚ್ಚಿದ ಮದುಮಗನನ್ನು ಬದುಕಿಸಿದ್ದು.
* ಸೊನಗಾರನೊಬ್ಬ ಗಣಪತಿ ಪ್ರತಿಮೆ ಮಾಡಹೊರಟು, ಹಯಮುಖನಾದ ಆ ಮೂರ್ತಿಯ ನಿಮಿತ್ತ ಇಡೀ ಅಕ್ಕಸಾಲಿನ ಪಂಗಡವನ್ನು ವೈಷ್ಣವ ಧರ್ಮದವರನ್ನಾಗಿ ಮಾಡಿದುದು.
* ಜಗನ್ನಾಥದಾಸರು 'ಹರಿಕಥಾಮೃತಸಾರ'ವನ್ನು ರಚಿಸುವಂತೆ ಪ್ರೇರಣೆ ಕೊಟ್ಟದ್ದು.
* ಹಯಗ್ರೀವದೇವರು ಕಡಲೆ ಹೊಲವನ್ನು ಹೊಕ್ಕ ಮೇಲೆ ಅದೆಲ್ಲ ಬಂಗಾರದ ಕಡಲೆಯಾದದ್ದು.
* ಶ್ರೀ ವಾದಿರಾಜರ ಹೆಗಲ ಮೇಲೆ ತನ್ನ ಕಾಲ್ಗಳನ್ನಿರಿಸಿ ಹಯಗ್ರೀವದೇವರು ನೈವೇದ್ಯ ಹೂರಣವನ್ನು ಭಕ್ಷಿಸಿದ್ದು.
* ಉಡುಪಿಯ ರಥೋತ್ಸವ ಕಾಲಕ್ಕೆ ಬಂದ ಮಳೆಯನ್ನು ತಡೆದುದು.
* ಉತ್ತರ ಭಾರತ ಸಂಚಾರದ ಕಾಲಕ್ಕೆ ವೇದವ್ಯಾಸದೇವರ ದರ್ಶನ ಪಡೆದದ್ದು.
* ವಿಜಯನಗರದ ರಾಜನಿಗೆ ವಾಲಿಭಂಡಾರದ ಸಂಪತ್ತನ್ನು ತೋರಿಸಿ, ತಾವು ಶ್ರೀ ವಿಠ್ಠಲ ಹಾಗೂ ಶ್ರೀರಾಮದೇವರ ಮೂರ್ತಿಗಳನ್ನು ಮಾತ್ರ ತೆಗೆದುಕೊಂಡದ್ದು.
* ಅದ್ವೈತಿಯನ್ನು ಗೆದ್ದು ಬಂದ ಆನಂದಭಟ್ಟರಿಗೆ ಸಂತಾನವಾಗಲೆಂದು ಅನುಗ್ರಹಿಸಿದ್ದುದು.

* ಶೃಂಗೇರಿಮಠದಿ ಜಯಕೀರ್ತಿ ಹಾಕಿ ಬಂದ ವಿಪ್ರನಿಗೆ ನೇತ್ರವನ್ನು ಅನುಗ್ರಹಿಸಿದ್ದು.
* ಭೂತರಾಜರ ಹಿನ್ನೆಲೆ, ಶಾಪದ ಪ್ರಸಂಗ, ಮುಂದೆ ಅವರಿಂದ ತ್ರಿವಿಕ್ರಮದೇವರನ್ನು ರಥಸಹಿತವಾಗಿ ತರಿಸಿ, ಪ್ರತಿಷ್ಠಾಪಿಸಿದ್ದು.
* ಶ್ರೀ ವ್ಯಾಸರಾಯರು ಉಡುಪಿಯಿಂದ ತೆಗೆದುಕೊಂಡು ಹೋಗಿದ್ದ, ವ್ಯಾಸಮುಷ್ಟಿಯನ್ನು ಮರಳಿ ತಂದದ್ದು.
* ಸೋದೆಯ ಅರಸು ಅರಸಪ್ಪ ನಾಯಕನನ್ನು ಅನುಗ್ರಹಿಸಿದ್ದು, ಅವನ ಲಿಂಗಾಯತ ಗುರುವನ್ನು ಸೋಲಿಸಿ ಗೆದ್ದುಕೊಂಡಿದ್ದ ಬಿರುದುಗಳನ್ನೆಲ್ಲ ಅವನು ವಾದಿರಾಜರಿಗೆ ಅರ್ಪಿಸಿದ್ದು.
* ನಿರ್ಯಾಣಕಾಲದಲ್ಲಿ ಪಂಚವೃಂದಾವನ ನಿರ್ಮಿಸಿ ಮಧ್ಯದಲ್ಲಿ ಸಶರೀರಿಯಾಗಿ ವೃಂದಾವನಸ್ಥರಾದುದು.

ಶ್ರೀ ವಾದಿರಾಜರ ಕೃತಿರಚನೆಯಲ್ಲಿ ಕೆಲವನ್ನು ಮೇಲಿಂದ ಮೇಲೆ ಹರಿದಾಸರು ಉಲ್ಲೇಖಿಸುತ್ತಾರೆ. ಅವೆಂದರೆ ರುಕ್ಮಿಣೀಶವಿಜಯ, ಯುಕ್ತಿಮಲ್ಲಿಕಾ, ತೀರ್ಥಪ್ರಬಂಧ ಹಾಗೂ ಮಹಾಭಾರತದ ಶಬ್ದಗಳಿಗೆ ಅರ್ಥವನ್ನು ಬರೆದು ತಾಯಿಯ ಹರಕೆಯನ್ನು ತೀರಿಸಿದ್ದರ ಕೃತಿ; ಮತ್ತು ಕನ್ನಡ ಹಾಡುಗಳಲ್ಲಿ 'ಲಕ್ಷ್ಮೀಶೋಭಾನ'.

ಶ್ರೀ ವಾದಿರಾಜರ ಬದುಕಿನ ಇತಿವೃತ್ತವೆಂಬಂತೆ (ಅಂಕಿತ ರಹಿತವಾದ) ೩೧ನೆಯ ಹಾಡು ಇದೆಯಲ್ಲವೆ. ಅದರಲ್ಲಿ 'ವರದ್ವಾದಶ ಸ್ತೋತ್ರದಿ ಬಹು ವಿಷಹರನಹುದು ನಿಜ – ಎನುತ ಅರುಹಿ' (ನುಡಿ ೧೧) ಮತ್ತು 'ಅಂಧತೆಯಲ್ಲಿ ಶ್ರೀಕೃಷ್ಣನ ದರುಶನಕ್ಕೆ ಬಂದು ಒಡನೆ ಕಂಡು ... ಸ್ವಾದಿಗೆ ಮರಳುತಾ' ಎಂಬ ಮಾತುಗಳಿವೆ. ಇವೆರಡರ ಸಂದರ್ಭಗಳು ಅಪರಿಚಿತವೆಂಬಂತೆ ತೋರುತ್ತಿವೆ.

ಕೆಲವೊಂದು ಸಂದರ್ಭಗಳ ವರ್ಣನೆ ನಾಟಕೀಯ ರೀತಿಯಲ್ಲಿ ಹೃದಯಂಗಮವಾಗಿ ಕೊಟ್ಟದ್ದಿದೆ. ತ್ರಿವಿಕ್ರಮದೇವರ ತೃತೀಯ ರಥೋತ್ಸವದ ಕಾಲಕ್ಕೆ ಸ್ವರ್ಗಲೋಕಕ್ಕೆ ಕರೆದೊಯ್ಯ ಬಂದ ದೇವತೆಗಳನ್ನು ತಡೆದು ನಿಲ್ಲಿಸಿದ ಸಂದರ್ಭವನ್ನು ಪ್ರೇಮಕೃಷ್ಣರು ತಮ್ಮ ಹಾಡಿನಲ್ಲಿ ಸೊಗಸಾಗಿ ಕೊಟ್ಟಿದ್ದಾರೆ. (ಹಾಡು ೫೫). ಲಕ್ಷ್ಮೀಶೋಭಾನವನ್ನು ವಾದಿರಾಜರು ಹಾಡಿ ಮದುಮಗನನ್ನು ಬದುಕಿಸಿದ್ದರ ವರ್ಣನೆಯೂ ಇದೇ ರೀತಿಯಲ್ಲಿದೆ.

(ಫಣಿಶಾಯಿವಿಠಲ ಕೃತ ೨೯ನೆಯ ಹಾಡು). ಅಂದ ಹಾಗೆ ೨೧ನೆಯ ಹಾಡಿನಲ್ಲಿ 'ನಾಶಿಕದ ಶ್ವಾಸಭೇದ ಮೂರು ವಿಧ ಪ್ರೇರಿಸುವ' ಎಂಬ ಮಾತು ಗೂಢಾರ್ಥವನ್ನು ಒಳಗೊಂಡಿದೆ. ನನಗೆ ವಿಶೇಷ ಮೆಚ್ಚಿಕೆಯಾದದ್ದು. ಶ್ರೀ ವಾದಿರಾಜರ ವೇಷ, ಸ್ವರೂಪಗಳನ್ನು ಗುರುಜಗನ್ನಾಥರು ಯಪಮಾಲೋಲತೆಯಿಂದ ಹೇಳಿದ ೨೭ನೆಯ ಹಾಡು.

ಯತಿಕುಲವರ್ಯನ ಸ್ಮಿತಯುತ ವಕ್ತ್ರವರ್ತುಲವೊ
ಅರಳಾಂಬುಜವೋ
ಅತಿಮಹಿಮನ ವರಸಿತಕರ ದಂತಾವಳಿಯೋ
ಮಲ್ಲಿಗೆ ಮುಗುಳೋ
ಕ್ಷಿತಿಸುರವಂದನ ಅತಿ ಸುಂದರ ನಾಸಿಕವೋ
ತಿಲಕ ಕುಸುಮವೊ
ಗತಿಶೂನ್ಯಗೆ ಸದ್ಗತಿದಾತನ ನಯನಗಳೋ
ನೈದಿಲೆಯುಗಳೋ

ಇಂಥದೇ ಕಲ್ಪಕತೆಯನ್ನು ಮುದ್ದುಹಯವದನರು, ಸೂರ್ಯ ಚಂದ್ರಾದಿ ನವಗ್ರಹಗಳೆಲ್ಲವೂ ಶ್ರೀ ವಾದಿರಾಜರಲ್ಲಿ ಪ್ರತಿಫಲಿತವಾಗಿವೆಯೆಂಬ ಮಾತಿನಲ್ಲಿ ವ್ಯಕ್ತಪಡಿಸಿದ್ದಾರೆ. (೧೨೯ನೆಯ ಹಾಡು):

ಯತಿಯೆ ನಿನ್ನಯ ತೇಜವೆನಗಿನ್ನು ಭಾನುಬಲ
ಹಿತಮುಖಾಬ್ಜ ದರುಶನವೆ ಹಿಮಕರ ಬಲ, ಇತ್ಯಾದಿ

ಸುಪ್ರಸಿದ್ಧ ಗುರುಗೋವಿಂದವಿಠಲರ ಒಂದು ಹಾಡಿನಲ್ಲಿಯ ಭಾವತುಷ್ಟಿ ಇದೇ ರೀತಿಯಲ್ಲಿ ಮೆಚ್ಚುವಂತಹದಿದೆ. ಶ್ರೀ ವಾದಿರಾಜರು ೧೨೦ ವರ್ಷ ಬಾಳಿದರಷ್ಟೆ. ಅಂದರೆ ಸರಿಯಾಗಿ ಎರಡು ಯುಗಗಳ ಕಾಲ (೬೦+೬೦). ಅವರು ಜನಿಸಿದ್ದು ಶಾರ್ವರಿ ಸಂವತ್ಸರದಲ್ಲಿ. ಅಂದಾಗ ವೃಂದಾವನಸ್ಥರಾದದ್ದೂ ಶಾರ್ವರಿಯಲ್ಲೇ ಎಂದಾಯಿತಲ್ಲವೆ. ಗೊತ್ತಿದ್ದ ವಿಷಯ ಆದರೆ ಅದನ್ನು ನಮ್ಮ ಗಮನಕ್ಕೆ ತಂದ ರೀತಿ ಖುಷಿ ಕೊಡುತ್ತದೆ. (ಹಾಡು ೬೬).

**ಈಚಿನವರು**

ಇಪ್ಪತ್ತನೆಯ ಶತಮಾನದ ಇನ್ನು ಕೆಲವರನ್ನು ಇಲ್ಲಿ ಹೆಸರಿಸಬೇಕು. ಚಂಜಿ ಧ್ರುವರಾಯರು ಮೂಲತಃ ಹೈದರಾಬಾದಿನವರು. 'ಅರವಿಂದನಾಭವಿಠಲ' ಎನ್ನುವ ಅವರ ಅಂಕಿತವನ್ನು ಪ್ರಾಯಶಃ

ತಂದೆಮುದ್ದುಮೋಹನದಾಸರು ಕೊಟ್ಟಿರಬೇಕು. 'ಕರಿಗಿರೀಶ' – ಎಂದರೆ ವರವಣಿ ರಾಮರಾಯರು ಈ ಶತಮಾನದವರೇ. 'ಕೃಷ್ಣವಿಠಲ' ಎನ್ನುವುದಕ್ಕೆ 'ಶ್ರೀನಿವಾಸ' ಎಂಬ ಉಪನಾಮವನ್ನು ಸೇರಿಸಿ ವಾದಿರಾಜರನ್ನು ಹೊಗಳಿದವರ ಹೆಸರು ಭೀಮರಾವ. ೨೦ನೆಯ ಶತಮಾನದ ಆರಂಭದಲ್ಲಿದ್ದವರು; ಉರಗಾದ್ರಿವಾಸವಿಠಲರ ಸಂಬಂಧಿಕರಾದ್ದರಿಂದ ಅವರೇ ದಾಸದೀಕ್ಷೆಯನ್ನು ಕೊಟ್ಟಿರಲು ಸಾಕು.

'ಜಯಶೇವಿಠಲ'ರೆಂದರೆ ಇನ್ನಾರೂ ಅಲ್ಲ; ಮೈಸೂರಿನ ಕಟ್ಟೆಮನೆಯ ಅಟ್ಟಾಜಿ ವೆಂಕಟರಮಣಾಚಾರ್ಯರು (೧೯೪೦–೧೯೨೫). ಅವರ ಕೀರ್ತನೆಗಳು ಅರ್ಥಗರ್ಭಿತವಿರುವುದರ ಜೊತೆಗೆ, ಸುಶ್ರಾವ್ಯವಾಗಿ ಹಾಡಲು ಬರುವಂತಿದೆ. 'ತಂದೆವೆಂಕಟೇಶವಿಠಲ'ರ ಹೆಸರು ರಾಮಚಂದ್ರರಾವ್ ಎಂಬುದು. ಹೆಚ್ಚು ಕಾಲ ಅವರು ವಾಸಿಸಿದ್ದು ಚಿತ್ರದುರ್ಗದಲ್ಲಿ. (ಪದಗಳು: ೮೯–೮೮), ಅವರ ಹಾಡುಗಳ ಬೃಹತ್ ಸಂಗ್ರಹ ಈಚೆಗೆ ಪ್ರಕಟವಾಗಿದೆ. ಆ ಮುಂದಿನ ಹಾಡಿನ ರಚಯಿತರು ನಾಗಶಯನವಿಠಲರು (ಪದ ೮೧), ನಿಜವಾದ ಹೆಸರು ಬಾಟ್ಲಿ ನಾಗರಾಜ್‌ರಾವ್, ಶಿಕಾರಿಪುರದರು. ಅವರೂ ಉರಗಾದ್ರಿವಾಸವಿಠಲರ ಶಿಷ್ಯರೆಂದು ಹೇಳುತ್ತಾರೆ.

ಫಣಿಶಾಯಿವಿಠಲರ ಆರು ಹಾಡುಗಳನ್ನು ಇಲ್ಲಿ ಸೇರಿಸಿದ್ದರ ಕಾರಣ, ಅವರಲ್ಲಿ ವಿಚಾರದ ಹೊಸತನ ಅಲ್ಲಲ್ಲಿ ಹೊಮ್ಮಿದೆ. ಅವರ ನಿಜವಾದ ಹೆಸರು ಮಾಲಾಡಿ ಫಣಿಭಟ್ಟ ಎಂಬುದು. ಅವರು ಒಳ್ಳೆಯ ಕೀರ್ತನಕಾರರು. ಆ ಮುಂದಿನ 'ಶ್ರೀಮುದ್ದುವಿಠಲ' ಮುದ್ರಿಕೆಯ ಶ್ರೀಮತಿ ಪಡಸಲಗಿ ರುಕ್ಮಿಣಿಬಾಯಿಯವರ ಬಗ್ಗೆ ಒಂದೆರಡು ವಿಷಯಗಳನ್ನು ಹೇಳಬೇಕು. ಅವರು ಕಲಿತದ್ದು ಕೇವಲ ೪–೫ ಇಯತ್ತೆಯವರೆಗೆ. ಅವರ ತವರಿನ ಮನೆತನ ಕಲಮದಾನಿಯವರದು. ಕಲಮದಾನಿ ನಾರಾಯಣರಾಯರು ದಾಸ ಸಾಹಿತ್ಯವನ್ನು ಸಂಗ್ರಹಿಸಿದವರು, ಆಳವಾಗಿ ಅಭ್ಯಸಿಸಿದವರು. ಸ್ವತಃ ಹಾಡುಗಳನ್ನು ರಚಿಸಿದವರು. ಇಂಥ ವಾತಾವರಣದಲ್ಲಿ ಬೆಳೆದು ಬಂದ ರುಕ್ಮಿಣಿ ಅವರಿಗೆ ಭಕ್ತಿಭಾವದ ಕವನ ರಚನೆ ಸಹಜಸ್ಫೂರ್ತವಾಗಿದೆ. ನೂರಾರು ಕವನಗಳನ್ನು ರಚಿಸಿದ್ದು, ಸದ್ಯ ಹುಬ್ಬಳ್ಳಿಯಲ್ಲಿ ವಾಸವಾಗಿದ್ದಾರೆ. 'ಗೋವಿಂದಪ್ರಿಯ' ಅಥವಾ 'ಗೋವಿಂದವಿಠಲ' ಮುದ್ರಿಕೆಯವರ ನಿಜವಾದ ಹೆಸರು ಮಂಜುನಾಥ ಭಾತ್ರ, ಚಿಕ್ಕಮಗಳೂರಿನ ಕಡೆಯವರು; ಕೀರ್ತನೆಗಳ ರಾಗ, ಧಾಟಿಗಳನ್ನು ಚೆನ್ನಾಗಿ ಬಲ್ಲ ಅವರು ದಾಸ ಸಾಹಿತ್ಯದ ಕಾರ್ಯವನ್ನು ಮುಂದುವರಿಸಿದ್ದಾರೆ.

ಕೊನೆಯದಾಗಿ ಇಲ್ಲಿಯ ಹಾಡುಗಳಲ್ಲಿ ಕಂಡುಬರುವ ನುಡಿಗಟ್ಟು, ಹರಿದಾಸರ ಹಾಡುಗಳ ಭಾಷೆಯಲ್ಲಿ ಶಬ್ದಗಳು ರೂಢಿಗತವಾದವುಗಳೇ ಇರುತ್ತವೆ. ವ್ಯಾಕರಣದ ನಿಯಮಗಳನ್ನು, ಅದರಂತೆ ದ್ವಿತೀಯ ಪ್ರಾಸ ನಿಯಮವನ್ನು ಅವರುಗಳು ಕಟ್ಟುನಿಟ್ಟಾಗಿ ಪಾಲಿಸುವುದಿಲ್ಲ. ಅವರು ಸ್ವಯಂ ಪ್ರೇರಣೆಯಿಂದ ಹಾಡುಗಳನ್ನು ರಚಿಸುತ್ತಾರೆ. ಈಗಿನ ಕಾಲದ ಕವಿಗಳಂತೆ ಕುಳಿತು ಬರೆಯುವ ಕ್ರಮ ಅವರದ್ದಲ್ಲ. ಆದ್ದರಿಂದ ಎಷ್ಟೋ ಬಾರಿ ವಿಚಿತ್ರ ರೀತಿಯಲ್ಲಿ ಪದಗಳನ್ನು ಜೋಡಿಸುತ್ತಾರೆ. ಎನ್ಹಣಿಗೆ (ಎನ್ನ ಹಣೆಗೆ), ನಿನ್ವಸನಾಗಿಹ (ನಿನ್ನ ವಶನಾಗಿಹ) ಸನ್ಹಿತ (ಸನ್ನಿಹಿತ) ಎಂಬಂಥ ಪದಗಳು ಮೇಲಿಂದ ಮೇಲೆ ಬರುತ್ತದೆ. ಅವನ್ನು ಸುಧಾರಿಸಿಕೊಂಡು ಅವಲೋಕಿಸಬೇಕಾಗಿ ವಿನಂತಿ. ಆದರೆ. ಹಾಡುಗಳಲ್ಲಿ ಅನುಪ್ರಾಸ ಮಾತ್ರ ತಾನೇ ತಾನಾಗಿ ಮೆರೆದಿದೆ. 'ವಾದಿರಾಜ ಸ್ವಾದಿರಾಜ' ಎಂಬಂತಹ ಪದಗುಚ್ಛಗಳು ಮನಸ್ಸಿಗೆ ಹಿತವನ್ನಂಟುಮಾಡಬಲ್ಲವು.

ಇಂತಿದೆ ಈ ಸಂಕಲದ ರೀತಿ, ಮೇಲೆ ಹೇಳಿದಂತೆ ಶ್ರೀ ವಾದಿರಾಜರೇ ಇಲ್ಲಿಯ ಏಕಮೇವ 'ಕಥಾವಸ್ತು' ಆಗಿರುವುದರಿಂದ ಅನೇಕ ವಿಷಯಗಳ ಪುನರಾವೃತ್ತಿ ಇರುವುದು ಸಹಜ. ಒಳ್ಳೆಯದೇ ಆಯಿತಲ್ಲ. ಗುರುಗಳನ್ನು ಪದೇ ಪದೇ ನೆನೆಯುವುದಕ್ಕೆ! ಆ ಕಾರಣದಿಂದ ಇದು, ಒಮ್ಮೆ ಓದಿಬಿಟ್ಟು ಬದಿಗಿರಿಸುವ ಕೃತಿಯಾಗುವುದಿಲ್ಲ; ಹಾಗೆ ಆಗಬಾರದು.

ಹೀಗೆ ಈ ಹಾಡುಗಳು ಹಲವಾರು ವೈಶಿಷ್ಟ್ಯಗಳಿಂದ ಕೂಡಿದ್ದಾಗಿ, ಅರ್ಥಪೂರ್ಣವಾಗಿ ವಾಚನಕ್ಕೂ ಭಕ್ತಿಭಾವದಿಂದ ಹಾಡುವುದಕ್ಕೂ ಅನುಕೂಲವಾಗಿವೆ ಎಂದು ನಮ್ರವಾಗಿ ಸೂಚಿಸ ಬಯಸುತ್ತೇನೆ.

*ಸಂಪಾದಕ*

## ಪ್ರಕಾಶಕರಿಂದ

ಈಗ ೧೫೦ ವರ್ಷಗಳ ಹಿಂದೆ ಶ್ರೀ ವಾದಿರಾಜ ಯತಿಗಳ ಮೃತ್ತಿಕಾ ವೃಂದಾವನಗಳು, ನಾಲ್ಕೈದು ಬಿಟ್ಟರೆ, ಬೆರಳೆಣಿಕೆಯಷ್ಟೂ ಇರಲಿಲ್ಲ ಆ ಕಾಲದಲ್ಲಿ ಹಾವನೂರಲ್ಲಿ ನಿರ್ಮಿತವಾದ ವೃಂದಾವನ ಅತ್ಯಂತ ಪ್ರಾಚೀನವಾದವುಗಳಲ್ಲಿ ಒಂದು. ಇತಿಹಾಸವನ್ನು ತುಸು ಕೆದರಿದಾಗ ತಿಳಿದು ಬಂದ ಅಂಶಗಳಿವು. ಗುರುಗಳ ಪರಮಭಕ್ತರಾದ ಜಂಬುಖಂಡಿ ವಾದಿರಾಜಾಚಾರ್ಯರು ಬೆಳಗಾವಿಯಲ್ಲಿದ್ದವರು. ಅಲ್ಲಿ ಅನೇಕ ಜನ ಶಿಷ್ಯಪ್ರವಿಷ್ಯ ವಾದಿರಾಜರ ಭಕ್ತರಾಗಿ ಹೋದವರು. ಅಂಥವರಲ್ಲಿ ಬೆಳಗಾಂವಕರ ಮನೆತನದವರೂ ಒಬ್ಬರು ಅವರ ಹೊಲ-ಮನೆಗಳು ಹಾವನೂರ ಗ್ರಾಮದಲ್ಲಿ ಇದ್ದುವೆಂಬುದಕ್ಕೆ ಹಳೆ ದಾಖಲೆಗಳ ಮೂಲಕ ಈಚೆಗೆ ತಿಳಿದು ಬಂದಿದ್ದು ಅವರ ೪-೫ ತಲೆಮಾರುಗಳ ಹಿಂದೆ ಅಂದರೆ ೧೮೬೦-೭೦ ರ ಸುಮಾರಿಗೆ ಮಠವನ್ನು ಸ್ಥಾಪಿಸಲಾಯಿತು. ಮಠದಲ್ಲಿಯ ಪೂಜೆ-ಪುನಸ್ಕಾರ, ಆರಾಧನೆ ಮುಂತಾಗಿ ನಡೆಸುವ ಅಧಿಕಾರವನ್ನು ಬೆಳಗಾಂವಕರ ಮನೆತನದವರು ೧೯೩೫-೪೦ ಸುಮಾರಿಗೆ, ನಮಗೆ ಅಂದರೆ ಇಲ್ಲಿಯ ಗಲಗಲಿ ಮನೆತನದವರಿಗೆ ಒಪ್ಪಿಸಿಕೊಟ್ಟಿದ್ದಾರೆ. ಅದನ್ನು ಶ್ರದ್ಧಾಪೂರ್ವಕ ನಾವು ನಡೆಸಿಕೊಂಡು ಬಂದಿದ್ದೇವೆ.

ಗುರುಗಳ ದಯದಿಂದ, ಮಠದ ಆವರಣವನ್ನು ವಿಸ್ತರಿಸಲಾಗಿದೆ. ಕೀರ್ತನೆ, ಪ್ರವಚನ ಕಾರ್ಯಕ್ರಮಗಳಿಗೆಂದು ಸಭಾಮಂಟಪವಿದೆ ಈಚೆ ನೂತನವಾಗಿ ಗರ್ಭಗುಡಿಯ ಹಿಂದೆ ಬೆಳಗಾಂವಕರ ಸುಧೀಂದ್ರರು ಮತ್ತು ಕುಟುಂಬದವರು ತಮ್ಮ ತಂದೆ ತಾಯಿಗಳ ಸ್ಮರಣೆಗೆಂದು ಧ್ಯಾನ ಮಂದಿರವನ್ನು ಕಟ್ಟಿಸಿಕೊಟ್ಟಿದ್ದಾರೆ. ಶ್ರೀ ವಾದಿರಾಜರ ಆರಾಧ್ಯ ದೇವರಾದ ತ್ರಿವಿಕ್ರಮದೇವರ ಮೂರ್ತಿಯನ್ನು ಬೆಂಗಳೂರಿನ ಶ್ರೀ ರಮಾನಾಥರು ಒದಗಿಸಿದ್ದಾರೆ. ಇತರ ಭಕ್ತಜನರ ಮತ್ತು ಇತರ ಭಕ್ತರು ಹಯಗ್ರೀವ ದೇವರ ಮೂರ್ತಿಯನ್ನು, ವೃಂದಾವನಕ್ಕೆ ಬೆಳ್ಳಿಯ ಕವಚವನ್ನು, ಉತ್ಸವಕ್ಕಾಗಿ ರಥವನ್ನೂ ಮಾಡಿಸಲಾಗಿದೆ.

ಈ ಮಧ್ಯೆ ಉತ್ತರಾದಿಮಠದ ಶ್ರೀ ಸತ್ಯಾತ್ಮತೀರ್ಥರು, ಪೇಜಾವರ ಮಠದ ಶ್ರೀ ವಿಶ್ವೇಶತೀರ್ಥರು ಹಾಗೂ ಕೂಡಲಿ ಶ್ರೀ ಆರ್ಯ ಅಕ್ಷೋಭ್ಯತೀರ್ಥ ಮಠದ ಶ್ರೀಗಳವರು ಇಲ್ಲಿಯ ಮಠವನ್ನು ಸಂದರ್ಶಿಸಿ ತಮ್ಮ ಸಂತೋಷವನ್ನು ವ್ಯಕ್ತಪಡಿಸಿ ನಮ್ಮನ್ನು ಆಶೀರ್ವದಿಸಿದ್ದಾರೆ. ವಿಶೇಷವೆಂದರೆ ಸೋದೆಯ

ಮಠದ ಈಗಿನ ಸ್ವಾಮಿಯವರಾದ ಶ್ರೀ ವಿಶ್ವವಲ್ಲಭ ತೀರ್ಥರು ಈ ಗ್ರಂಥಕ್ಕೆ ಶುಭವನ್ನು ಹಾರೈಸಿ ನಮ್ಮನ್ನು ಹರಿಸಿದ್ದಾರೆ.

ಶ್ರೀ ಮಠದ ವತಿಯಿಂದ ಗ್ರಂಥ ಪ್ರಕಟಣ ಕಾರ್ಯವನ್ನು ಕೈಗೊಂಡಿದ್ದು ಈವರೆಗೆ ಶ್ರೀ ವಾದಿರಾಜತೀರ್ಥರ ಸ್ತುತಿಪರ ಹಾಡುಗಳು; ಸವಣೂರಿನ 'ಶ್ರೀ ಸತ್ಯಬೋಧತೀರ್ಥರ ಮೇಲಿನ ಕೀರ್ತನೆಗಳು'; 'ಹರಿದಾಸರು ಸ್ತುತಿಸಿದ ಮಂತ್ರಾಲಯ ಮಠದ ಯತಿವರೇಣ್ಯರು'; 'ಸೋದೆಮಠದ ಪರಮಗುರು ಶ್ರೀ ವಿಶ್ವೇಂದ್ರತೀರ್ಥರ ಕೀರ್ತನ ಮಂಜರಿ'; ಜೊತೆಗೆ ಶ್ರೀ ವಾದಿರಾಜರನ್ನು ಕುರಿತು ಇಂಗ್ಲೀಷ್ ಗ್ರಂಥವೂ ಪ್ರಕಟಗೊಂಡಿವೆ. ಶ್ರೀ ವಾದಿರಾಜ ವಿರಚಿತ 'ತೀರ್ಥಪ್ರಬಂಧ'ದ ಕಾವ್ಯಾತ್ಮಕ ಸಮೀಕ್ಷಾ ಗ್ರಂಥವು ಈಚೆಗೆ ಪ್ರಕಟವಾಗಿದೆ.

ಪ್ರಸ್ತುತ ಗ್ರಂಥವು ಪೇಜಾವರ ಶ್ರೀಗಳವರ ಆಸ್ಥೆಯಿಂದಾಗಿ ೧೯೯೮ರಲ್ಲಿ ಮೊದಲು ಪ್ರಕಟವಾಯಿತು. ಈ ಮಧ್ಯಂತರ ಅವಧಿಯಲ್ಲಿ ಅನೇಕ ಹೊಸ ಕೀರ್ತನೆಗಳು ವಿವಿಧ ಜನರ ನೋಟ್‌ಬುಕ್‌ನಲ್ಲಿ ದೊರೆತವು. ಅವೆಷ್ಟೋ ಈಗ ಮೊದಲ ಬಾರಿಗೆ ದೊರೆತವುಗಳು. ಗುರುಗಳ ಭಕ್ತರ ವೃಂದ ಬೆಳೆಯುತ್ತ ಹೊರಟಿದ್ದುದರಿಂದ ದ್ಯೋತಕವೆನ್ನಬಹುದು. ಹೀಗಾಗಿ ವಿಸ್ತಾರಿತವಾದ ದ್ವಿತೀಯ ಆವೃತ್ತಿಯನ್ನು ಹೊರತರಬೇಕೆಂದು ಯೋಚಿಸಿದೆವು ಮತ್ತು ಈ ವರ್ಷದ ಆರಾಧನೆಯ ಕಾಲಕ್ಕೆ (೨೦೧೦ ಮಾರ್ಚ್ ೨-೪) ಬಿಡುಗಡೆ ಮಾಡಲಾಗುತ್ತಿದೆ. ಆ ಪುಣ್ಯದ ಕೆಲಸವನ್ನು ಮಾಡುವವರು ದಾಸ ಸಾಹಿತ್ಯ ಪ್ರವೀಣೆಯಾದ ಡಾ.ಟಿ.ಎನ್.ನಾಗರತ್ನ ಅವರು ಶ್ರೀ ವಾದಿರಾಜರ ಸಮಗ್ರ ಕೃತಿಗಳನ್ನು ಶಾಸ್ತ್ರಜ್ಞವಾಗಿ ಸಂಪಾದಿಸಿ ಮೈಸೂರು ವಿಶ್ವವಿದ್ಯಾನಿಲಯ, ಅನಂತರ ಕರ್ನಾಟಕ ಸರಕಾರದ ವತಿಯಿಂದಲೂ ಪ್ರಕಟಿಸಿದ್ದಾರೆ. ಒಂದೇ ಶಬ್ದದಲ್ಲಿ ಹೇಳಬೇಕೆಂದರೆ ಅವರು ಶ್ರೀ ವಾದಿರಾಜರ ಕಾವ್ಯ ಸಾಹಿತ್ಯದ ಒಬ್ಬ 'ಅಥಾರಿಟಿ', ಅವರಿಗೆ ನಮ್ಮ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ಇದರ ಪ್ರಕಾಶನ ಕಾರ್ಯದಲ್ಲಿ ನೆರವಾದವರೆಂದು ಕುಮಾರಿ ಶ್ರೀಮತಿ ಗೀತಾ, ಶ್ರೀಮತಿ ನಿರ್ಮಲಾ ಗಣೇಶ ಇವರನ್ನೂ ಚೊಕ್ಕಟವಾಗಿ ಮುದ್ರಿಸಿಕೊಟ್ಟ 'ವರ್ತಮಾನ'ದ ಶ್ರೀ ಸುಬ್ಬರಾಯರನ್ನೂ ಮನಸ್ವೀ ನೆನೆಯುತ್ತೇವೆ.

ಹಾವನೂರ
ದಿ. ೦೨-ಮಾರ್ಚ್ ೨೦೧೦

*ಶ್ರೀ ವಾದಿರಾಜ ಮೃತ್ತಿಕಾ ವೃಂದಾವನದ*
*ಪ್ರಕಟನ ಸಮಿತಿ*

# ಕೀರ್ತನಾ ರಚಯಿತರು

| ಹೆಸರು | ಹಾಡಿನ ಸಂಖ್ಯೆ |
|---|---|
| ಶ್ರೀ ನಾರಾಯಣಾಚಾರ್ಯ | ೬ |
| ಶ್ರೀ ವಿಶ್ವೇಂದ್ರತೀರ್ಥರು (ಹಯಮುಖ) | ೧, ೨, ೩, ೧೩, ೧೪೬ |
| ಶ್ರೀ ವೇದನಿಧಿತೀರ್ಥರು | ೮ |
| ಶ್ರೀ ವೇದವೇದ್ಯ ತೀರ್ಥರು | ೫ |
| ಶ್ರೀ ಸುಧೀಂದ್ರ ತೀರ್ಥರು | ೭ |
| ಶ್ರೀ ಸತ್ಯಧರ್ಮತೀರ್ಥರು | ೯ |
| ಅನಂತವಿಠಲರು (ಶ್ರೀ ಅನಂತಸ್ವಾಮಿರಾವ್) | ೨೭ |
| ಅಭಿನವ ಜನಾರ್ದನ ವಿಠಲರು | ೮೫, ೮೮, ೧೨೭, ೧೩೪ |
| ಅರವಿಂದನಾಭವಿಠ್ಠಲರು | ೯೭ |
| ಇಂದಿರೇಶ (ಪಾಂಡುರಂಗ ಹುಚ್ಚಾಚಾರ್ಯರು) | ೩೧, ೭೪ |
| ಕಮಲೇಶಿಷ್ಟರು [?] | ೩೫ |
| ಕರಿಗಿರೀಶರು | ೨೯, ೧೦೮ |
| ಕಾರ್ಪರ ನರಹರಿ | ೭೭ |
| ಕಾಳಿಮರ್ದನ ಕೃಷ್ಣ (ಕಳಸದ ಸುಂದರಮ್ಮ) | ೧೦೨, ೧೧೫ |
| ಕೃಷ್ಣವಿಠಲ | ೭೩, ೭೫, ೧೦೬, ೧೪೭ |
| ಕೃಷ್ಣ ವಿಠಲರು | ೪೮, ೧೧೨ |
| ಗಿರಿಬಾಲೆವರದ | ೪ |
| ಗುರುಗೋವಿಂದ ವಿಠಲರು | ೨೦, ೨೪, ೩೧, ೪೦, ೪೩, ೫೧, ೬೦, ೬೬, ೬೯, ೮೨, ೯೬, ೧೧೬, ೧೨೪, ೧೩೨, ೧೪೧, ೧೪೪ |
| ಗುರುಜಗನ್ನಾಥವಿಠಲರು | ೧೮, ೩೬, ೫೬, ೮೪, ೧೦೪, ೧೦೬, ೧೦೭, ೧೦೯, ೧೧೯ |
| ಗುರುತಂದೆ ವರದಗೋಪಾಲ ವಿಠಲರು | ೬೪, ೧೩೭, ೧೩೮ |
| ಗೋಪತಿವಿಠಲ | ೭೬ |
| ಗೋಪಾಲವಿಠಲರು | ೮೯ |
| ಗೋವಿಂದವಿಠಲರು | ೯೦ |
| ಜಗನ್ನಾಥ ವಿಠಲರು | ೬೮, ೭೩, ೯೧ |
| ಜಯೇಶ ವಿಠಲರು | ೬೫ |
| ತಂದೆವರದಗೋಪಾಲವಿಠಲರು | ೧೧, ೨೨, ೪೪, ೧೩೬, ೧೪೨, ೧೪೮ |
| ತಂದೆವೆಂಕಟೇಶ ವಿಠಲರು | ೬೩, ೯೩, ೯೮ |
| ತಂದೆ ಶ್ರೀಪತಿ ವಿಠಲರು | ೭೮ |

## ೧. ಶ್ರೀಹರಿಯ ಮತ್ತು ಗುರು ಸನ್ನಿಧಿಯ ಕೀರ್ತನೆಗಳು

(೧)

### ಶ್ರೀ ಹಯಗ್ರೀವದೇವರು

('ರಾಗಿಯ ತಂದೀರಾ' ಎಂಬ ಪುರಂದರದಾಸರ ಹಾಡಿನ ಧಾಟಿಯಂತೆ)

ಕುದುರೇ ಕಂಡೀರಾ ಚೆಲುವ ಕುದುರೇ ಕಂಡೀರಾ
ಬಿಳೀ ಕುದುರೆ ಕಂಡೀರಾ ಪ

ಮಧ್ವರಾಯರಿಗೊಲಿದ ಕುದುರೆ
ವಾದಿರಾಜರ ಪೊರೆದ ಕುದುರೆ
ಇಂದಿರಾದೇವಿಯನಪ್ಪಿದ ಕುದುರೆ
ಬಂದರೆ ನರರು ಬೆದರದ ಕುದುರೆ ೧

ಮಂದರಗಿರಿಯಾನೆತ್ತಿದ ಕುದುರೆ
ಚಂದಿರನಂತೆ ಪೊಳೆವಾ ಕುದುರೆ
ಸೋದೇಪುರದೊಳಿರುವಾ ಕುದುರೆ
ಮೋದದಿಂದಾ ಮೆರೆವಾ ಕುದುರೆ ೨

ಸುರರಿಗಮೃತವಿತ್ತಾ ಕುದುರೆ
ನರನ ರಥವನೇರ್ದಾ ಕುದುರೆ
ಸ್ಮರನ ತಾತನೆನಿಪಾ ಕುದುರೆ
ಸುರತರುವನ್ನೇ ತಂದ ಕುದುರೆ ೩

ಕಡಲೆ ಹೂರಣ ಮೆಲುವ ಕುದುರೆ
ಪಂಢರಪುರದಿ ಮೆಯ್ದ ಕುದುರೆ
ಪುಂಡರೀಕನಿಗೊಲಿದ ಕುದುರೆ
ಪಾಂಡವರನ್ನು ಪೊರೆದ ಕುದುರೆ ೪

ಸುತ್ತಾಮುತ್ತಲು ಆಡುವ ಕುದುರೆ
ಮತ್ತೆ ವಾದಿಯಾ ಗೆಲ್ವಾ ಕುದುರೆ
ಶತ್ರುಗಳೆಲ್ಲರ ಒದೆವಾ ಕುದುರೆ
ತತ್ವ ಹಯವದನನ ಆಹಾ ಕುದುರೆ! ೫

ರಾಜನಾಥನೆನಿಪಾ ಕುದುರೆ
ವಾಜಿವದನನೆನಿಪಾ ಕುದುರೆ
ಕಂಜಸುತಗೇ ಶೃತಿಯನಿತ್ತ
ಕಂಜನಾಭನೆನಿಪ ಕುದುರೆ ೬

ಟಿಪ್ಪಣಿ : ಶ್ರೀ ವಾದಿರಾಜರೇ ರಚಿಸಿದ "ಕುದುರೆ ಬಂದಿದೆ ಚೆಲುವಾ ಕುದುರೆ ಬಂದಿದೆ" ಎಂಬ ಹಾಡನ್ನೂ ಇಲ್ಲಿ ಗಮನಿಸಬಹುದು.

(೨)

## ಶ್ರೀತ್ರಿವಿಕ್ರಮದೇವರು

**ದೇವಾಧಿದೇವ ಶ್ರೀತ್ರಿವಿಕ್ರಮರಾಯ**
ದ್ಯಾವಾಭೂಮಿಯ ವ್ಯಾಲ್ನಿನ್ನ ಕಾಯ
ಪಾದನಖಾಗ್ರದಿ ಬ್ರಹ್ಮಾಂಡವನ್ನು
ಭೇದಿಸಿ ಗಂಗೆಯ ಜನಿಸಿರ್ದ ಕಾಯ ಪ

ಅಣುರೂಪದಿಂದಿದ್ದು ಕ್ಷಣದೊಳಗದ್ಭುತ
ರೂಪಾವ ಧರಿಸಿ ಬಲಿಯಾ ಬಂಧಿಸಿದಿ
ರಣಶಬ್ದವಿಲ್ಲದೆ ಸರ್ವ ಸಾಮ್ರಾಜ್ಯವ –
ನಗ್ರಜಗಿತ್ತಿಹ ಕಾರ್ಯವಾಶ್ಚರ್ಯ ೧

ವಾದಿರಾಜರಿಗೆ ನೀ ಒಲಿದು ಸೋದೆಯಲಿ
ನಿಂತಿದ್ದ ತರವತಿಚೋದ್ಯವಾಗಿಹುದು
ಕದನವೆ ಆಗಿಲ್ಲ ಭೂಭುಜರಲ್ಲಿ
ಬಲಿದುದು ಹರಿಭಕ್ತರ್ಗತಿ ತೋಷಕಾರ್ಯ ೨

ಕಂಜಾಕ್ಷ ಶ್ರೀಕೃಷ್ಣಗೋಲೆಯರ್ಪಿಸಿದ
ರಾಜೇಶಹಯಮುಖ ದಾಸರೆಂದೆನಿಪ
ರಾಜ್ಯದೊಳತಿಮಾನ್ಯ ವಾದಿರಾಜರ ಭಾಗ್ಯ
ದೇವಾಧಿದೇವ ಶ್ರೀತ್ರಿವಿಕ್ರಮರಾಯ ೩

(೩)

## ಸೋದಾಕ್ಷೇತ್ರ

ಸೋದಾಕ್ಷೇತ್ರವೆ ದಿವ್ಯಕ್ಷೇತ್ರ
ಬಂದ ಜನರಿಗಿಷ್ಟವನೀವ ಕ್ಷೇತ್ರ
ವಾದಿರಾಜರು ವಾದದಿಂದಲಿ
ವಾದಿ ವೀರಶೈವರ ಗೆದ್ದ ಕ್ಷೇತ್ರ ಪ

ಒಂದು ಭಾಗದಿ ರೌಪ್ಯಪೀಠ ಮ-
ತ್ತೊಂದು ಭಾಗದಿ ಸೋದಾಕ್ಷೇತ್ರ
ಕುಂದು ಎಳ್ಳಷ್ಟಿಲ್ಲದೆ ತೋರ್ಪಂದು
ಹರಿಭಕ್ತರಾರಿಪಾ ಕ್ಷೇತ್ರ ೧

ಒಂದೇ ಸ್ಥಾನದಿ ಶ್ವೇತದ್ವೀಪ
ಮತ್ತೆ ವೈಕುಂಠಾನಂತಾಸನ
ಒಂದಾಗಿ ಶೋಭಿಸುತಿರುವಾ
ಚೆಂದವೇನೆಂದು ಪೇಳಲಿ ಮನವೆ ೨

ರಾಜೇಶಹಯಮುಖ ಚರಣ
ಕಂಜಮಧುಪನಂತಿರುವ ಶ್ರೀಭಾವಿ-

ಕಂಜಜಾತನ ಪದಕೇರುವ ವಾದಿ-
ರಾಜರಾಯರ ದಿವ್ಯ ಕ್ಷೇತ್ರ ೩

(೪)

**ನಂಬಿರೆ ಸೋದೆರಾಜರ ಚರಣವ ಸಂಭವವುಂಟು ಮುಕ್ತಿಪದ** ಪ

ಕರ್ಮವನುತ್ತಮವೆಸಗಲು ಬೇಕು
ಧರ್ಮದ ಮಾರ್ಗದಿ ನಡೆವುತಲಿ
ಕರ್ಮವದೆಮ್ಮದು ಎಂಥದೆ ಇರಲಿ
ಧರ್ಮವು ಎಮ್ಮನು ಕೈಬಿಡದು ೧

ಭಕ್ತಿಲಿ ಕೇಳಿರಿ ಸಜ್ಜನರೆ
ಮುಕ್ತಿಗೆ ದಾರಿ ಒಂದಿಹುದು.
ಶಕ್ತರಾಗಿಹ ರಾಜರ ಚರಣವ
ಸೂಕ್ತವು ನಂಬಲು ಜೀವನದಿ ೨

ಉಡುಪಿಯ ಎಂಟು ಮಠಗಳಲ್ಲಿ
ಕಡೆಗಣಿಸುವ ಮಠ ಒಂದಿಲ್ಲ
ನಡೆವುವು ಅಲ್ಲಿ ಮಹಿಮೆಗಳಾದರು
ಚೂಡಾಮಣಿಯದು ಸೋದೆಮಠ ೩

ಗುರುರಾಜರ ಮಠವೆಂದೂ ಖ್ಯಾತವು
ಗುರುರಾಜರೆಂಬ ಯತಿಗಳು ಅದರಲ್ಲಿ
ಸರಾಸರಿ ನಾಲ್ನೂರು ವರ್ಷದ ಕೆಳಗೆ
ನೇರಾಗಿ ಆಳುತ್ತ ಇದ್ದರಯ್ಯ ೪

ನೂರಇಪ್ಪತ್ತು ವರುಷ ಬದುಕಿ
ಸಿರಿವೈಭವದ ಐದು ಪರ್ಯಾಯದ
ಹರಿಸೇವೆಯನೆ ಕೃಷ್ಣಗೆ ಅರ್ಪಿಸಿ
ಪರಿಪರಿ ಜನಮನ ತಣಿಸಿದರು ೫

ಕಡಲೆಯ ಬೇಯಿಸಿ ಸಕ್ಕರೆ ಬೆರೆಸಿದ
ಮಡ್ಡಿಯನವರು ತಲೆಯಲಿ ಪೊತ್ತರೆ
ನೀಡುತ ಕತ್ತನು ಕುದುರೆಯ ರೂಪಿಲಿ
ಕಡೆಗೋಲ ಕೃಷ್ಣನು ತಿಂಬನಂತೆ ೬

ದೇವರನುಣಿಸಿದ ಮಹಾನುಭಾವರ
ಸೇವೆಯ ಭಾಗ್ಯಕೆ ಎಣೆಯುಂಟೆ
ಯಾವ ಜನ್ಮದ ಪುಣ್ಯದ ಫಲವೋ
ಕೇವ ಪಡೆದರು ಭೂತರಾಜರು ೭

ಅವರ ಕತೆಯನು ಕೇಳುವಿರಾ
ಅವರೊಬ್ಬ ಪಂಡಿತ ದ್ವಿಜರಂತೆ
ಪಾವನ ನಾಮವು ನಾರಾಯಣನೆಂದು
ದುರ್ವಾದಗೈದರಂತೆ ರಾಜರಲಿ ೮

ರಕ್ಕಸ ಜನ್ಮದಿ ಕಾಡಿಲಿ ಸುತ್ತುತೆ
ಫಕ್ಕನೆ ದಾರಿಗ ಜನರನು ಪಿಡಿದು
ಲೆಕ್ಕವಿಲ್ಲದೆ ಕೊಂದು ತಿನ್ನುತೆ
ಮಿಕ್ಕಲು ಪಾಪವು ತೃಪ್ತಿಯಿಲ್ಲ ೯

ಗುರುಗಳು ಬದರಿಗೆ ಪೋಗುವ ದಾರಿಲಿ
ಗರುಜನೆ ಮಾಡುತೆ ನಿಲ್ಲಿಸಿ ನುಡಿದರು
"ಸರಿಯಾದ ಉತ್ತರ ಕೊಡಿರೆನವಾದಕೆ
ಮೀರಲು ನುಂಗುವೆ ನಿಮ್ಮನೀಗ" ೧೦

ವಾದಿಗಜಕೇಸರಿ ಗುರುರಾಜರು
ವಾದಿರಾಜ ಸಿರಿಬಿರುದಿಲಿ ಮೆರೆವರೆ
ಮೋದತೀರ್ಥರ ಸ್ಥಾನಕೆ ಬರುವ
ಸೋದೆಯ ರಾಜರ ಗೆಲ್ಲುವುದುಂಟೆ ೧೧

ಕೇಳಿದ ಎಲ್ಲಾ ಜಟಿಲ ಪ್ರಶ್ನೆಗಳಿಗೂ
ಸುಲಭದಿ ಮಂದಟ್ಟಾಗುವ ತೆರದಲಿ
ಪಲಪಲ ವಿವರದ ಉತ್ತರ ಕೊಡಲು
"ಎಲಲ ಅರಿತೆನು" ಎಂದಿತು ಭೂತ ౧౨

"ತಪ್ಪು, ತಪ್ಪು ಒಡೆಯ ತಪ್ಪು
ಒಪ್ಪಿದೆ ಗುರುವೆ ತಪ್ಪನು ಕ್ಷಮಿಸಿ
ಪಾಪಿಗೆ ಮುಂದಿನ ಗತಿಯನು ಒರೆಯುತ
ಪಾಪವೃತ್ತಿಯಿಂದೆನ್ನನು ರಕ್ಷಿಸಿ" ೧೩

ಎಂದೀ ವಿಧದಲಿ ಪ್ರಾರ್ಥನೆ ಮಾಡುತೆ
ಮುಂದಾಗಿ ಅಡಿಗಳ ಪಿಡಿಯಲು ಬೇಗ
ಚೆಂದಾದ ಉದ್ಧಾರ ಸೂಚಿಹ ದನಿಯಲಿ
"ಕಂದ ಏಳೇಳು" ಎಂದರು ರಾಜರು ೧೪

"ಮುಂದಿನ್ನು ನೀನು ಎನ್ನ ಜತೆಯಲೆ
ಅಂದದಿ ಎನ್ನಾ ಅಂದಣ ಪೊರೆವಂತೆ
ಸುಂದರ 'ಭೂತರಾಜ'ನ ನಾಮದಿ
ಕುಂದದ ಖ್ಯಾತಿಯ ಪಡೆಯುವಿಯೊ" ೧೫

ಈ ತೆರ ಅನುಗ್ರಹ ಮಾಡಿದರೆ ಯತಿ
ಪೂತವಾಯಿತು ಭೂತದ ಜನ್ಮ
ರೀತಿ ಮಹಾತ್ಮರ ಅರಿವವರಾರು
ನಾಥರವರು ಅನಾಥರಿಗೆ ೧೬

ರಾಜರೆಂದರೆ ಯಾರೆಂದು ಬಗೆದಿರಿ
ಮೂಜಗವನು ಬೆದರಿಪ ರಾವಣ
ಸೋಜಿಗದಿ ಅಸುನೀಗ ಮಾಡುವ
ವಾಜಿವದನನ ಸೇವಕ ಮಾರುತಿ ೧೭

ಇನ್ನೂ ಹೇಳಲೆ ಮೂರನೆ ಯುಗದಲಿ
ತನ್ನ ನಲ್ಲನೆ ಎಂದೆಂದಿಗು ಕೃಷ್ಣ
ಎನ್ನುವ ನಿಜ ಬಲ್ಲ ರುಕ್ಮಿಣಿ ದೇವಿ
ಮಣ್ಣಿ ಲೋಕದ ಕಣ್ಣಿಗೆ ಎರಚಲು ೧೮

ಬರೆದಳು ಕೃಷ್ಣಗೆ ವಿನಂತಿಯ ಪತ್ರವ
'ಯಾರಿದನೊಯ್ಯುವ'ರೆಂದು ಚಿಂತಿಸಿ
"ಮಾರುತಿ ಪದವಿಗೆ ಮುಂದಕೆ ಬರುವ
ಹಾರುವನೆ ಸರಿ" ಎಂದು ನಕ್ಕಳು ೧೯

ಭಾವಿಸೆ ಮನದಲಿ ಬಂದನೆ ದ್ವಿಜವರ
"ಯಾವ ಕೆಲಸವೊ ಅಪ್ಪಣೆಯಿರಲೆ"ನೆ
"ಪಾವನ ಚರಿತ ಮುಂದಿನ ಮರುತ
ನೀವೀಗ ವಾಯುವೇಗದಿ ಪೋಗಿ ೨೦

ಭಾವಜನಯ್ಯಗೆ ಕೊಡಿರೆನ ಒಸಗೆ
ದೇವನ ಮೌನಕೆ ಕಾರಣವರಿಯೆ
ಜೀವವೆನದಯ್ಯ ಘಾಸಿಗೊಳುತಿದೆ
ಧಾವಿಸಿ ಇಲ್ಲವೆ ಅನರ್ಥವಪ್ಪುದು ೨೧

ಯಾರಿಗು ತಿಳಿಯಲು ಬಾರದು ಸಂಗತಿ
ಪರಮ ರಹಸ್ಯದಿ ಒಯ್ಯಲು ಅಹುದು
ಮರೆಯೆನು ನಿಮ್ಮೀ ಉಪಕಾರವನು
ಸಾರುವೆ ಮಹನೀಯನೆ ನೆನಪಿರಲಿ ೨೨

ಎನ್ನ ಮನದನ್ನ ತಾ ಮುನ್ನ ಸಂಪನ್ನ
ಚೆನ್ನ ಸ್ವಾಮಿ ಹಯವದನ ಘನ್ನ
ರನ್ನ ಭಕ್ತ ಸುಜರ ಮುಕುಟದ
ಮುನ್ನೆ ಚೆನ್ನಪುರಿ ದ್ವಾರಕೆಯಲಿ" ೨೩

ಎಂದಳು ರುಕ್ಮಿಣಿ ಲೋಕದ ತಾಯಿ
ಮಂದಹಾಸದಿ ಬ್ರಾಹ್ಮಣನೊರೆದ
"ಮಂದಟ್ವಾಯಿತು ರಾಜನಂದಿನಿ
ಸಂದಿತೆನಗೆ ಈ ಪತ್ರವಾಹನದ ೨೪

ಕುಂದದ ಪುಣ್ಯದ ಪವಿತ್ರಕಾರ್ಯ
ಮುಂದಿನ ಜನ್ಮದಲ್ಲೂ ಬೇಡುವೆ
ಎಂದೆಂದಿಗು ನಿಮ್ಮಿಬ್ಬರ ಸೇವೆಯ
ಸುಂದರ ಭಾಗ್ಯವು ಇರಲೆನಗೆ ೨೫

ಪೋಗುವೆ ದೇವಿ ಬೇಗದಿ ಬರುವೆ
ಮೇಘಶ್ಯಾಮನ ಪಾದಕೆ ಮಣಿದು
ತಗ್ಗಿ ಬಗ್ಗಿ ಪ್ರಾರ್ಥಿಸಿ ಪೇಳುವೆ"
"ಬಿಗುಮಾನ ತೊರೆದು ಪಾದ ಬೆಳೆಸಿರಿ ೨೬

ರಾಜತನಯೆ ನಮ್ಮ ರುಕ್ಮಿಣಿ ದೇವಿ
ರಾಜರಾಜೇಶ್ವರಿ ಸ್ವಾಮಿ ಹೃದಯದ
ವಾಜಿವದನನೆ ಬಲ್ಲಿರಿ ನೀವು
ಸೋಜಿಗವಪ್ಪ ಪ್ರಣಯ ಪತ್ರವ ೨೭

ಕಳುಹಿದಳಯ್ಯ ಓದುತೆ ಮುಂದಿನ
ಸುಳುವನು ಅರಿತು ಎಸಗಿರಿ ಕಾರ್ಯ
ಕಳಕಳಿಯಿಂದಿಂತು ಅರಿಕೆ ಮಾಡುತ
ಪಲ ವಿಧದಲಿ ತಿಳಿ ಹೇಳಿ ಮರಳುವೆ" ೨೮

ಇಂತು ಮನಸಿಗೆ ತಂಪನೀಯುವ
ಸಂತಸದ ಸವಿ ಮಾತನು ಆಡುತ
"ಪಂಥದಿ ಕಾರ್ಯವ ಕೈಗೂಡಿ ಬರುವೆ"
ಇಂತೆಂದು ಹೊರಟರೆ ಜೀವೋತ್ತಮರು ೨೯

ಭಾವುಕ ಭಕ್ತರ ಮನವನು ಮೋಹಿಸೆ
ಆವಾವ ತೆರನ ಲೀಲೆಗಳ
ತಾವಾಡಿ ತೋರ್ಪರು ಭಕ್ತಾಧೀನರು
ಭವಭಂಗ ಭಕ್ತರ ತೀರಲೆಂದು ೩೦

ಇಂಥ ಲೀಲೆಯ ಮಾಧುರ್ಯವನು
ಕಂತುಪಿತನ ದಾಸರೆ ಬಲ್ಲರು
ಅಂತಿಂಥವರೆಲ್ಲ ಅರಿಯಲು ಅರಿದು
ಇಂತಿದು ಸಂತರ ತೀರ್ಪಿಹುದು ೩೧

ಎಂದೇ ಕೇಳಿರಿ ಆಸ್ತಿಕ ಜನರೆ
ಮುಂದೆ ನಡೆದುದನೇನೆಂಬೆ
ತಂದೆತಾಯಿ ಮೂಜಗಕವರು
ಅಂದಾದರು ನೂತನ ವಧುವರರು ೩೨

ಮುಂದಿನ ಕಲ್ಪದ ತ್ರೇತಾಯುಗದಿ
ಸಂದಲಿಹುದೊಂದು ಬಂಧುರ ಚರಿತೆ
ಸುಂದರಿ ಸೀತಾಮಾತೆಯ ಇರವನು
ಚೆಂದದಿಂದ ಶ್ರೀರಾಮಗೆ ಅರುಹುದು ೩೩

ಅದಕು ಮುಂಚಿಗೆ ಈ ಕಲಿಕಾಲದಿ
ಮುದದಿಂದ ಜನರನು ಉದ್ಧರಿಸೆ
ಸೋದೆ ಸಂಸ್ಥಾನದ ಮಧ್ವ ಪೀಠದ
ವಾದಿರಾಜ ಯತಿವರರಾದರಯ್ಯ ೩೪

ದುರ್ಮತಿಗಳನೆಲ್ಲ ವಾದದಿ ಜಯಿಸಿ
ಮರ್ಮ ತಿಳಿದೆಲ್ಲ ಕರ್ಮವ ತಿದ್ದಿ
ವರ್ಮ ಯಾರಲೂ ಕಟ್ಟಿಕೊಳ್ಳದೆ
ಧರ್ಮಗುರುಗಳಾಗಿ ಬೆಳಗಿದರಯ್ಯಾ ೩೫

ಭೂಮಿಯ ಸಕಲ ತೀರ್ಥಯಾತ್ರೆಯ
ಸ್ವಾಮಿ ಕಾಲಿಲೆ ಸುತ್ತಿದರಯ್ಯ
ಕಾಮನಯ್ಯನ ಪೂಜಿಪ ಯತಿವರ
ನಾಮಾಂಕಿತ ವಾದಿಮಲ್ಲರಾದರೆ ೩೬

ಭೂಮಿಪ ಸೋದೆ ಅರಸಪ್ಪನ ಗುರು
ಸೋಮೇಶೇಖರನ ಭಕ್ತ ಮಾಯಿಯ
ಹಮ್ಮು ಖಂಡಿಸಿ ದಮ್ಮು ಅಡಗಿಸಿ
ಬಿಮ್ಮನೆ ಹತ್ತಿದರು ಮುತ್ತಿನ ಗದ್ದಿಗೆ ೩೭

ಮತ್ತ ದುರ್ವಾದಿಗಳ ಬಿತ್ತನೆ ಅಡಗಿಸಿ
ಮತ್ತೆ ಸತ್ತವರನೆಷ್ಟೋ ಬದುಕಿಸಿ
ಎತ್ತೆತ್ತಲು ಸಂತೋಷವ ಹರಿಸಿದ
ಉತ್ತಮ ಮಹಿಮನ ಪೊಗಳಿ ತಣಿವುದೆ ೩೮

ನಾನಾ ಶಾಸ್ತ್ರದ ಗ್ರಂಥಗಳನ್ನೆ
ಸನ್ನುತ ಜನರಿಗೆ ಸಂಸ್ಕೃತದಲ್ಲಿ
ಮುನ್ನ ಅರ್ತಿಲಿ ಬರೆದರು ಸಂಸ್ಕೃತ
ಕಾಣದ ಜನರಿಗೆ ಕನ್ನಡದಲ್ಲಿ ೩೯

ಕರುಣಾಳು ನಮ್ಮ ಪರಮ ಗುರು
ಸುರಧೇನು ಸದೃಶನೆ ಸಂಶಯವಿಲ್ಲ
ಹರಿಜನರಿಗಾಗಿ ತುಳುವಿನಲ್ಲಿ ಬರೆದರು
ಹರಕೆಯ ಲೇಲೇಸೊ ಹಾಡುಗಳನ್ನು ೪೦

ಅಗಾಧ ಮಹಿಮ ಗುರುರಾಜರೀಗ
ರಾಗದಿ ಪಂಚವೃಂದಾವನದಲ್ಲಿ
ಯೋಗ ಜಿತಾಸನರಾಗಿಯೆ ಇದ್ದು
ಸೊಗದ ಸೋದೆಯ ಬೆಳಗುವರಯ್ಯ ೪೧

ಸಗ್ಗದ ಸಿರಿ ಸುರತರುವಿನಂತೆ
ಬಗ್ಗುವ ಭಕ್ತರಿಗಿಚ್ಛಿತವೀವರು
ಒಗ್ಗದ ಜನರನು ದೂರಕೆ ದೂಡಿ
ಹಿಗ್ಗಿಸುವರು ತಮ್ಮ ದಾಸರನು ೪೨

"ಗುರುವೆ ನಿಮ್ಮ ಪಾದವೆ ಗತಿ" ಎನೆ
ಹರಿಸುವರೆ ದಿವ್ಯ ಕರುಣಾಸ್ರೋತದಿ
ಪರಿಹರಿಸುವರು ಇಹದ ಸಕಲ
ದುರಿತಗಳನು ನಂಬಿರಿ ಭಕ್ತರೆ ೪೩

ಸತ್ಯ ಸತ್ಯವು ಮೂರು ಬಾರಿಗು
ಮಿಥ್ಯೆಯನೊರೆಯೆನು ಸ್ವಾನುಭವವಿದು
ಮರ್ತ್ಯಲೋಕದ ಪ್ರತ್ಯಕ್ಷ ಕಲ್ಪತರು
ಸತ್ಯಲೋಕದ ದಾರಿಯ ಬೆಳಕು ೪೪

ಮನುಜ ಜನ್ಮದಿ ಭೂಮಿಲಿ ಪುಟ್ಟಿ
ಮನುಜರಂತೆಯೆ ಬಾಳಲು ಕಲಿಯುವ
ಮನುಜಗೆ ಬೇಕಯ್ಯ ದೇವರು ಧರ್ಮ
ಮನಸಿಲಿ ಸದ್ಗುರು ಭಕ್ತಿಯು ನಿಜಕು ೪೫

ಸೋದೆಯಲಿರುವ ವಾದಿರಾಜರ
ಮೋದ ಕೊಡುತಿಹ ದಿವ್ಯ ದ್ಯುತಿಯ
ಪಾದಗಳನ್ನೆ ನಂಬಲು ಸ್ವಪ್ನದಿ
ಬೋಧಿಪರಯ್ಯ ಸಮ್ಯಗ್‌ಜ್ಞಾನ ೪೬

ಗುರುವಿನ ಗುಲಾಮನಾಗದೆ ಮುಕ್ತಿ
ದೊರಕದು ಎಂದರು ಪುರಂದರದಾಸರು
ಗುರುಸಾರ್ವಭೌಮರು ಗಿರಿಬಾಲೆವರದರು
ಪರಮ ಮಂಗಳ ಮಹಿಮರು ಸತ್ಯ ೪೭

ನಂಬಿರಿ ವಾದಿರಾಜರ ಚರಣವ
ಸಂಭವವುಂಟು ಮುಕ್ತಿಪದ
ಅಂಬುಜಾಕ್ಷನ ದಯೆಯಲಿ
ಬಿಂಬಿಸಿದೆನೀ ಭಕ್ತಿಪದ ೪೮

ಇದರಂತೆ ಶ್ರೀ ವಾದಿರಾಜರ ಚರಿತ್ರೆಯನ್ನು ತಕ್ಕಮಟ್ಟಿಗೆ ದೀರ್ಘವಾಗಿ ಒಳಗೊಂಡ ಇನ್ನು ಕೆಲವು ಕೀರ್ತನೆಗಳಿವೆ.

## ೨. ಶ್ರೀ ವಾದಿರಾಜ ಪ್ರಶಸ್ತಿಯ ಸಂಸ್ಕೃತ ಶ್ಲೋಕಗಳು

(೫)

### ಶ್ರೀ ವೇದವೇದ್ಯತೀರ್ಥ ಕೃತಿಃ

ಚಂದ್ರಾರ್ಕಕೋಟಿಲಾವಣ್ಯಂ ಲಕ್ಷ್ಮೀಶಕರುಣಾಲಯಮ್
ವಂದಿತಾಂಘ್ರಿಯುಗಂ ಸದ್ಭಿರ್ವಾದಿರಾಜಂ ನತೋಽಸ್ಮ್ಯಹಂ

ಇಂದ್ರಾದಿದೇವತಾರಾಧ್ಯ ಮಧ್ವ ವಂಶಜಮಾದರಾತ್
ವಂದಿತಾಂಘ್ರಿಯುಗಂ ಸದ್ಭಿರ್ವಾದಿರಾಜಂ ನತೋಽಸ್ಮ್ಯಹಂ

ಶ್ರೀಹಯಾಸ್ಯಾರ್ಚನರತಂ ಸಾಧುವೇದಾರ್ಥಬೋಧಕಂ
ವಂದಿತಾಂಘ್ರಿಯುಗಂ ಸದ್ಭಿರ್ವಾದಿರಾಜಂ ನತೋಽಸ್ಮ್ಯಹಂ

ದುರ್ವಾದಿಮತ್ತವಿಧ್ವಂಸಕಂಠೀರವಮಹರ್ನಿಶಂ
ವಂದಿತಾಂಘ್ರಿಯುಗಂ ಸದ್ಭಿರ್ವಾದಿರಾಜಂ ನತೋಽಸ್ಮ್ಯಹಂ

......................................................................
ವಂದಿತಾಂಘ್ರಿಯುಗಂ ಸದ್ಭಿರ್ವಾದಿರಾಜಂ ನತೋಽಸ್ಮ್ಯಹಂ

ಮಂತ್ರಕ್ರಮವಿಚಾರಜ್ಞಂ ತಂತ್ರಶಾಸ್ತ್ರಪ್ರವರ್ತಕಂ
ವಂದಿತಾಂಘ್ರಿಯುಗಂ ಸದ್ಭಿರ್ವಾದಿರಾಜಂ ನತೋಽಸ್ಮ್ಯಹಂ

ಜ್ಞಾನಾದಿಗುಣಸಂಪನ್ನಮಶೇಷಾಘಹರಂ ವಿಭುಂ
ವಂದಿತಾಂಘ್ರಿಯುಗಂ ಸದ್ಭಿರ್ವಾದಿರಾಜಂ ನತೋಽಸ್ಮ್ಯಹಂ

ಪ್ರದಕ್ಷಿಣೀಕೃತಭುವಂ ಸ್ವಕ್ಷಮಾಲಾಧರಂ ವಿಭುಂ
ವಂದಿತಾಂಘ್ರಿಯುಗಂ ಸದ್ಭಿರ್ವಾದಿರಾಜಂ ನತೋಽಸ್ಮ್ಯಹಂ

ವಿಚಿತ್ರಮುಕುಟೋಪೇತಮಚಿಂತ್ಯಾದ್ಭುತದರ್ಶನಂ
ವಂದಿತಾಂಘ್ರಿಯುಗಂ ಸದ್ಭಿರ್ವಾದಿರಾಜಂ ನತೋಽಸ್ಮ್ಯಹಂ

ಪುರತೋ ವಾಸುದೇವಸ್ಯ ನಿವಸಂತಂ ಮಹಾದ್ಯುತಿಂ
ವಂದಿತಾಂಘ್ರಿಯುಗಂ ಸದ್ಭಿರ್ವಾದಿರಾಜಂ ನತೋಽಸ್ಮ್ಯಹಂ

*ಟಿಪ್ಪಣಿ:* ಇದನ್ನು ರಚಿಸಿದ ಶ್ರೀ ವೇದವೇದ್ಯತೀರ್ಥರು ಶ್ರೀ ವಾದಿರಾಜರ ಅನಂತರ ಸೋದೆಮಠದ ಪೀಠವನ್ನು ಅಲಂಕರಿಸಿದವರು.

(೬)

**ಶ್ರೀ ನಾರಾಯಣಾಚಾರ್ಯರ 'ವಾದಿರಾಜ ಕವಚ'**

ಭ್ರಾಜಲ್ಲಲಾಟೇ ಲಸದೂರ್ಧ್ವಪುಂಡ್ರಂ ಸ್ವಂಗಾರ ರೇಖಾಂಕಿತ
ಮಧ್ಯದೇಶಂ ।
ಆಕಂಠಮಾನಾಭಿ ಸುಲಂಬಮಾನಾಂ ಮಾಲಾಂ
ತುಲಸ್ಯಕ್ಷಮಯೀಂ ದಧಾನಂ ೧

ಶ್ರೀಮುದ್ರಯಾ ಚಿಹ್ನಿತಸರ್ವಗಾತ್ರಂ ಕರೋಲ್ಲ ಚ್ಛ್ರೀಜಪಮಾಲಿಕಂ
ಪರಮ್ ।
ಹೃತ್ಪುಂಡರೀಕಸ್ಥಶುಭಾಂಬರಸ್ಥಂ ಶ್ರೀವಾಜಿವಕ್ತ್ರಂ ಸತತಂ
ಸ್ಮರಂತಂ ೨

ಜಿತಾರಿಷಡ್ವರ್ಗಹೃತಾಘರಾಶಿಂ ಕೂರ್ಮಾಸನಸ್ಥಂ ಸುತಪಃ
ಪ್ರಭಾವಂ ।

ಶ್ರೀಮದ್ಧಯಗ್ರೀವದಯೈಕಪಾತ್ರಂ ಶಮಾದಿಸಂಪತ್ತಿಯುತಂ
ವಿರಾಗಿಣಂ ೩

ಸಚ್ಛಾಸ್ತ್ರನಿಷ್ಠಂ ಭುವಿ ರಾಜಮಾನಂ ವಾದೀಭಸಿಂಹಂ
ಸುಮತಪ್ರತಿಷ್ಠಿತಂ ।
ಏವಂ ಮುನೀಂದ್ರಂ ಕವಿವಾದಿರಾಜಂ ಧ್ಯಾತ್ವಾ ತದೀಯಂ
ಕವಚಂ ಪಠೇತ್ ಸುಧೀಃ ೪

ಗುರುಮಖಿಲಗುಣಜ್ಞಂ ಸದ್ಗುಣೈಕಾಧಿವಾಸಂ ಶಮದಮಪರಿನಿಷ್ಠಂ
ಸತ್ವನಿಷ್ಠಮ್ ವರಿಷ್ಠಮ್ ।
ಸಕಲಸುಜನಶಿಷ್ಟಂ ನಿತ್ಯನಿರ್ಧೂತಕಷ್ಟಂ ಹಯಮುಖಪದನಿಷ್ಠಮ್
ಮಾಂಭಜಂತ ಪ್ರಪನ್ನಾಃ ೫

ವಾದಿರಾಜ ಶಿರಃಪಾತು ಭಕ್ತತ್ರಾಣಕೃತೋದ್ಯವಃ ।
ವಾದಿರಾಜಃ ಪಾತು ಫಾಲಂ ಜಗದ್ವಂದ್ಯ ಪದಾಂಬುಜಃ ೬

ವಾದಿರಾಜಃ ಪಾತು ನೇತ್ರೇ ದೃಷ್ಟ ಭೂತೀರ್ಥ ಸಾಗರಃ ।
ವಾದಿರಾಜಃ ಶೃತೀ ಪಾತು ಶ್ರುತ್ಯರ್ಥ ಕೃತಚಾರುಧೀಃ ೭

ವಾದಿರಾಜಃ ಪಾತು ನಾಸಾಂ ಪ್ರಾಣಾಯಾಮ ಪರಾಯಣಃ ।
ವಾದಿರಾಜಃ ಪಾತು ವಕ್ತ್ರಂ ಹಯಗ್ರೀವ ಸ್ತುತಿಪ್ರಿಯಃ ೮

ವಾದಿರಾಜೋಽಧರಂ ಪಾತು ಮಧುರೀಕೃತ ನಿಸ್ವನಃ ।
ವಾದಿರಾಜಃ ಪಾತು ಕಂಠಂ ಚಿತ್ರ ಸಂಗೀತ ಸುಸ್ವನಃ ೯

ವಾದಿರಾಜಃ ಪಾತು ಭುಜೌ ತಪ್ತಾಯುಧ ಲಸದ್ಭುಜಃ ।
ವಾದಿರಾಜಃ ಪಾತು ಕರೌ ವಾಜಿವಕ್ತ್ರಾಂಘ್ರಿಪೂಜಕಃ ೧೦

ವಾದಿರಾಜಃ ಪಾತು ಚಿತ್ತಂ ಪೂರ್ಣವಿದ್ಯಾ ಹೃದಂಬುಜಃ ।
ವಾದಿರಾಜಃ ಪಾತು ನಾಭಿಂ ಪದ್ಮನಾಭ ಸ್ತುತಿಪ್ರಿಯಃ ೧೧

ವಾದಿರಾಜಃ ಪಾತು ಕಟಿಂ ದಿವ್ಯಸೂತ್ರ ಲಸತ್ಕಟಿಃ ।
ವಾದಿರಾಜಃ ಪಾತು ಚೋರೂ ಮೋಚಾಯುಗ ಸಮಪ್ರಭಃ ೧೨

ವಾದಿರಾಜಃ ಪಾತು ಜಂಘೇ ಹಯಾನನ ನತಿಪ್ರಿಯಃ ।
ವಾದಿರಾಜಃ ಪಾತು ಪಾದೌ ಕೃತಭೂಸತ್ತ್ರದಕ್ಷಿಣಃ ೧೩

ತಪೋಮಯತನುಃ ಶ್ರೀಮಾನ ಪಾತು ಮೇ ಸರ್ವತಸ್ತನುಮ್ ।
ವಾದೀಂದ್ರಃ ಪೂರ್ವತಃ ಪಾತು ದಿವ್ಯ ದಂಡಸ್ತು ದಕ್ಷಿಣೇ ೧೪

ಯೋಗೀಂದ್ರಃ ಪಶ್ಚಿಮೇ ಪಾತು ವಾಮೇ ಕವಿಕುಲಾಗ್ರಣೀಃ ।
ಆಗ್ನೇಯ್ಯಾಂ ಭೂಸುರಃ ಪಾತು ನೈಋತ್ಯಾಂ ಮಂಗಲಪ್ರದಃ ೧೫

ಹನೂಮತ್ಕಿಂಕರಃ ಪಾತು ವಾಯವ್ಯಾಂ ಭಕ್ತವತ್ಸಲಃ ।
ಈಶಾನ್ಯಾಂ ಪಾತು ಶುಭದಃ ಸರ್ವಾಶುಭ ನಿವರ್ತಕಃ ೧೬

ವಾದಿರಾಜಃ ಪಾತು ಚೋರ್ಧ್ವಮೂರ್ಧ್ವರೇತೋಗ್ರಣೀಃ ಸದಾ ।
ವಾದಿರಾಜಸ್ತ್ವಧಃ ಪಾತು ತಮೋದ್ವಾರ ನಿವರ್ತಕಃ ೧೭

ಓಂ ನಮೋ ಶ್ರೀ ವಾದಿರಾಜಾಯ ದೀರ್ಘದಾರಿದ್ರ್ಯ ಘಾತಿನೇ ।
ರಾಜಭೋಗಪ್ರದಾತ್ರೇ ಚ ನಮೋಽಸ್ತು ಜಯದಾಯಿನೇ ೧೮

ಮೂಕಮಾವಿಶ್ಯ ಮಾಂ ಸಾಕ್ಷಾದ್ವಾದಿರಾಜಗುರೂದಿತಮ್ ।
ಯ ಏತತ್ ಪಠತೇ ಭಕ್ತ್ಯಾ ಬಂಧಪಾಶಾದ್ವಿಮುಚ್ಯತೇ ೧೯

ಶ್ರೀ ವಾದಿರಾಜಕವಚಾದಸುತಾ ಸಸುತಾ ಭವೇತ್ ।
ನಾರೀ ನರೋಥ ಶೂದ್ರೋ ವಾ ಸರ್ವದೇದಂ ಪಠೇದ್ಯದಿ ೨೦

ಧರ್ಮಾರ್ಥಕಾಮ ಮೋಕ್ಷಾದೀನ್ ಲಭತೇ ನಾತ್ರ ಸಂಶಯಃ ।
ಶ್ರೀವಾದಿರಾಜಕವಚಂ ಭಕ್ತಿಯುಕ್ತಃ ಪಠೇದ್ಧ್ರುವಮ್ ೨೧

ಮನಸಾ ಚಿಂತಿತಂ ಹ್ಯರ್ಥಂ ಪ್ರಾಪ್ನೋತಿ ಸುಖಸಂತತಿಮ್ ।
ಭವೇತ್ಸರ್ವತ್ರ ವಿಜಯೀ ವಿದ್ವಾನ್ ದುರ್ವಾದಿ ಸೈನ್ಯತಃ ೨೨

ಸರ್ವವೃಶ್ಚಿಕಸಂಭೂತ ವಿಷವಿದ್ರಾವ ಕಾರಣಮ್ ।
ಮೂಕೋಹ್ಯ ಮೂಕತಾಂ ಯಾತಿ ಮೂರ್ಖೇವಿದ್ವತ್ತ್ವ
ಮಾಪ್ನುಯಾತ್ ೨೩

ಕುಷ್ಠೀ ಶಿಷ್ಟತ್ವಮಾಪ್ನೋತಿ ರೋಗೀರೋಗವಿಯೋಗವಾನ್ ।
ಕವಚಸ್ಯಾಸ್ಯ ಪಠನಾದ್ಭಕ್ತಿಯುಕ್ತೇನ ಚೇತಸಾ ೨೪

ಯ ಏತತ್ ಕವಚಂ ವಿದ್ವಾನ್ ಲಿಖಿತ್ವಾ ಪೂಜಯೇದ್ಯದಿ ।
ಭೂರ್ಜೇ ವಾ ತಾಲಪತ್ರೇ ವಾ ಸರ್ವಸಿದ್ಧಿಮವಾಪ್ನುಯಾತ್ ೨೫

ಸದ್ಭಕ್ತ್ಯಾ ಸತತಂ ಸುಶಾಸ್ತ್ರಸುರತಿಂ ಭಕ್ತಿಂ ರಮೇಶೇ ನಿಶಂ ।
ಭುಕ್ತಿಂ ಚಾಪಿ ಪರತ್ರ ಮುಕ್ತಿ ವಿಹಸದ್ವಿದ್ಯಾಂ ಯಶಃ
ಪ್ರಾಪ್ನುಯಾತ್ ೨೬

ವಿಮಲಸಕಲಗಾತ್ರಂ ಶುದ್ಧ ಕೈವಲ್ಯಪಾತ್ರಂ
ಶುಭಗುಣಗಣಸಾಂದ್ರಂ ಭೂಮಿಭೂಷಾಮಣೀಂದ್ರಂ ೨೭

ವಿದಿತಸಕಲಶಾಸ್ತ್ರಂ ಸಾಧುಚಿತ್ತಂ ಯತೀಂದ್ರಂ
ತುರಗವದನಭಾಜಂ ನೌಮಿ ಸದ್ವಾದಿರಾಜಂ ೨೮

ಮಾಯಿಭವೈರಿಣೇ ಮಾಧ್ವರಾದ್ಧಾಂತವನಚಾರಿಣೇ
ವಚೋನಖರಿಣೇ ವಾದಿರಾಜಕೇಸರಿಣೇ ನಮಃ ೨೯

ಕಾಮಧೇನುರ್ಯಥಾಪೂರ್ವಂ ಸರ್ವಾಭೀಷ್ಟಫಲಪ್ರದಾ
ತಥಾ ಕಲೌ ವಾದಿರಾಜಶ್ರೀಪಾದೋಽಭೀಷ್ಟದಸ್ಸತಾಂ ೩೦

ತಪೋವಿದ್ಯಾವಿರಕ್ತ್ಯಾದಿ ಸದ್ಗುಣೌಘಾಕರಾನಹಮ್ ।
ವಾದಿರಾಜಗುರೂನ್ ವಂದೇ ಹಯಗ್ರೀವ ದಯಾಶ್ರಯಾನ್ ೩೧

ಹಯಗ್ರೀವ ದಯಾಂಭೋಜ ಲೋಲಭೃಂಗಂ ಸತಾಂ ಗುರುಮ್ ।
ನಮಾಮಿ ಶ್ರೀ ವಾದಿರಾಜಂ ಜ್ಞಾನವೈರಾಗ್ಯ ಸಂಪದಮ್ ೩೨

ಕುಷ್ಠಾಪಸ್ಮಾರಲೂತಾದೀನ್ ಬಾಲಸ್ಫೋಟಾದಿಕಾನ್ ಬಹೂನ್
ಮೃತ್ತಿಕಾ ನಾಶಯತ್ಯೇವ ವೃಂದಾವನಗತಾ ಮುನೇಃ ೩೩

ವಾದಿರಾಜಗುರೋಃ ಪಾದ ಸಲಿಲಸ್ಯ ಚ ಪಾನತಃ ।
ಅಪಮೃತ್ಯುಂ ಜಯತ್ಯಾಶು ತಥಾ ಸೌಖ್ಯಮವಾಪ್ನುಯಾತ್ ೩೪

॥ ಇತಿ ಶ್ರೀ ವಾದಿರಾಜಕವಚಮ್ ಸಂಪೂರ್ಣಮ್॥

ಶ್ರೀ ಪೈಠಣಿ ನಾರಾಯಣಾಚಾರ್ಯರು ಶ್ರೀ ವಾದಿರಾಜರ ಕೃತಿಗಳಿಗೆ ವ್ಯಾಖ್ಯಾನ ಬರೆದವರಲ್ಲಿ ಮೊದಲಿಗರು.

## (೭)
## ಶ್ರೀ ಸುಧೀಂದ್ರತೀರ್ಥ ಕೃತಿಃ

**ಕಾ ವಾಽರ್ಧಾಂಗಂ ಪುರಾರೇಃ**
ಕಿಟಿವರವಿಲಸದ್ದಂಷ್ಟ್ರಯಾಽಧಾರಿ ಕಾ ವಾ
ಕೋ ವಾ ಶೇತೇಽಂ ಬುರಾಶೌ ಯುಧಿ ಧರಣಿಧವೈಃ
ಪ್ರಾಪ್ಯತೇ ಕೋ ನು ಶೂರೈಃ
ಕೋ ವಾ ನೈವಾಸ್ತಿ ಲಕ್ಷ್ಮೀದಿತಿಜಮಥನಯೋಃ ಕೋ
ಗುರುರ್ನಿರ್ಜರಾಣಾಂ
ಕೋ ವಾ ವಾಚ್ಯೋ ಧರಿತ್ರ್ಯಾಂ ಪ್ರತಿವಚನಗತೈಃ
ಮಧ್ವವರ್ಣೈರ್ಮುನೀಂದ್ರಃ

ಇದರ ಅರ್ಥ ಹೀಗಿದೆ:

ತ್ರಿಪುರವೈರಿಯಾದ ಈಶ್ವರನ ಅರ್ಧಾಂಗಿ ಯಾರು ? (ಭವಾನಿ); ವರಾಹರೂಪಿ ಹರಿಯಿಂದ ಕೋರೆದಾಡೆಗಳಲ್ಲಿ ಧರಿಸಲ್ಪಟ್ಟವಳು ಯಾರು? (ಮೇದಿನೀ); ಸಮುದ್ರದಲ್ಲಿ ಮಲಗಿರುವವನು ಯಾರು ? (ಮುರಾರಿ); ಶೂರರಾದ ರಾಜರು ಯುದ್ಧದಲ್ಲಿ ಏನನ್ನು ಗಳಿಸುತ್ತಾರೆ ? (ವಿಜಯ);

ಲಕ್ಷ್ಮೀ ನಾರಾಯಣರಿಗೆ ಪರಸ್ಪರ ಏನಿಲ್ಲ ? (ವಿಯೋಗ); ದೇವತೆಗಳ ಗುರು ಯಾರು ? (ವಾಗೀಶ) ಈ ಪ್ರಶ್ನೆಗಳ ಉತ್ತರಗಳಲ್ಲಿನ ಮಧ್ಯಮ ವರ್ಣಗಳನ್ನು ಕ್ರಮವಾಗಿ ಸೇರಿಸಿದಾಗ ಅದರಿಂದ ವಾಚ್ಯರಾಗುವ ಭೂಮಿಯ ಮೇಲಿನ ಮುನಿಶ್ರೇಷ್ಠರು ಯಾರು ? (ವಾದಿರಾಜಯೋಗಿ)

(೮)

### ಶ್ರೀ ವೇದನಿಧಿತೀರ್ಥ ಕೃತಿಃ

ಮಾತಾ ರಾಜಾ ಮತ್ಪಿತಾ ವಾದಿರಾಜಃ
ಭ್ರಾತಾ ರಾಜಾ ಮತ್ಸಖಾ ವಾದಿರಾಜಃ
ಸರ್ವಸ್ವಂ ಮೇ ವಾದಿರಾಜೋ ದಯಾಲು-
ರ್ನಾನ್ಯದ್ದೈವಂ ನೈವ ಜಾನೇ ನ ಜಾನೇ
ಹರಿಭಕ್ತಿದಯಾಂಬೋಧಿತರಲಕ್ರೀಡನೋತ್ಸುಕಾಃ
ಗುರವೋ ವಾದಿರಾಜಾರ್ಯಾಃ ಕರುಣಾಂ ವಿತರಂತು ಮೇ,

(೯)

### ಶ್ರೀ ಸತ್ಯಧರ್ಮತೀರ್ಥ ಕೃತಿಃ

ಕದಾ ಪುಣ್ಯಾರಣ್ಯೇ ಶುಭಧವಲಗಂಗಾಪರಿಸರೇ
ಚರನ್ ಸೂರೇಃ ಸೇವಾಜನಿತಪರಮಾನಂದಭರಿತಃ
ಅಯೇ ಸಂವಿತ್ಸ್ವಾಮಿನ್ ಹಯವದನ ವಾದೀಶವರದ
ಪ್ರಸೀದೇತಿ ಕ್ರೋಶನ್ನಿಮಿಷಮಿವ ನೇಷ್ಯಾಮಿ ದಿವಸಾನ್ ೧

ಶ್ರೀಮದ್ವಾಗೀಶಯೋಗೀ ವಿಶದತಮಮನೀಷೀಯ ಭಾಷ್ಯದಿಜಾತಂ
ಜಾತಂಜಾತೇತರಂ ಚಾಗಮಮಗಮದ್ಧೃತೌ ವಿಸ್ಮಿತಃ ಪ್ರೇಕ್ಷ್ಯ ಯಸ್ಮಿನ್
ಸರ್ವಂ ಸರ್ವಂ ಸಹಾಯಾಮಸಮಸಮ
ಇತಿ ಶ್ರೀಮತಾಂ ಸಾರ್ವಭೌಮೇ
ಭೌಮೇಹಾಹಾನಿದಾರ್ಚಾರ್ಚನಕರಮಕರೋತ್-
ಸಪ್ರಸೀದೇತ್ಸವಾದೀಟ್ ೨

ನಾನಾನೋನೋಹನಾನೋತ್ಪರಿಚಿತವಚಸಾऽಪಾತ್ತ
ಮೂಲೇನ ಮೂಲಾಂ
ನಾನಾನಾನನ್ಯಭಾವಂ ಗದತಿ ಜಗತಿ ನೋಚೇದ್ಭವಾನ್ನಪ್ರಭಾವಾತ್
ಸತ್ಯಂ ಸತ್ಯಭಿದಾದಿಶ್ರುತಿರತುಲಮತೇರ್ಯುಕ್ತಿಯುಕ್ತಾವಕಾಶಂ
ಶಂಕಾಯಾऽನಾದ್ಯದದ್ಯಾದಿತಿ ಶಶಪಥಾ ವಾದಿರಾಡ್-
ಬೋಧಯೇನ್ಮಾಂ ೩

ಪೂರ್ವಂ ಪೂರ್ವಂಚಕಾನಾಂ ಭವಶಿವಹರ-
ಹೇ ರುದ್ರ ಹೇರಂಬ ಪಾಹೀ
ತ್ಯಾಹೂತಪ್ರೇತನಾಥಪ್ರಮುಖಮಖಿಭುಜಾಂಭೂಭುಜಾಂಯಾ
ಭುಜಾನ್ಯಾ
ಸಾ ಸೋದಾऽಗಾಧಬೋಧಾನನುಚರವರ
ತವಾऽವಾಸತೋ ವಾಸುದೇವ
ವ್ಯಾಸಾವ್ಯಾऽಸ್ಯೇತಿ-ಗರ್ಜದ್ದ್ವಿಜ ಜನಮಹಿತಾ
ತಚ್ಚರಿತ್ರಂ ವಿಚಿತ್ರಮ್ ೪

ಮಸ್ತೇ ನ್ಯಸ್ತೇಂದುರೀಶಸ್ಸುರಸರಿತಿರತೀಶಾನುಗಾತ್ಸಾನುರಾಗಾ-
ದಾಗಾದಾಗಾರತೋऽತೂ ಗಾದ್ಧರಿಚರಣ
ದೃಗಿಚ್ಛಾಚ್ಛಲಾದ್ಯಾಪ್ರಯಾತಾ
ಚಕ್ರೇ ಸ ತ್ರಿಕ್ರಮೋऽತೋऽನುಮತಮನುಮನುಶ್ರೀಮತಾ-
ಪೂಜನೇನ ಸ್ವಜಾಯಾ
ಸಂಬದ್ಧಾ ಯಸ್ಯ ಬದ್ಧೋऽವಸದವತು ಸದಾ-
ದಾಸದಾಸಂ ಸವಾದೀಟ್ ೫

ವ್ಯಾಸೋಯಸ್ಯಾಸಮಶ್ರೀರ್ಧುರಿ ಹರಿವದನಶ್ಲೋ -
ಪರಿಷ್ಟಾದ್ ಗರಿಷ್ಠಃ
ಪಿಂಗಾಕ್ಷಾಣಾಂ ಸದೃಕ್ಷೇ ಕಿಲ ಜನಿ ವಿಜಯಾ
ಪಶ್ಚಿಮಃ ಪಶ್ಚಿಮೇऽಭೂತ್
ವ್ಯಾಸಪ್ರೇಷ್ಠೋಪಸವ್ಯೇ ಸಕಲಸಕಲಯಾ ಭಾಸಮಾನೋऽ
ಸಮಾನೋ

ಮೇದಿನ್ಯಾಂ ವಾದಿರಾಜೋ ಮಯಿ ದಯತು ದಯಾ-
ಯಾ-ದಸಾಂ ನಾಯಕೋಽಲಂ ೬

ನವರತ್ನಾನ್ವಯೋತ್ಥೇನ ಪುಮುತ್ತಂಸೇನ ನಿರ್ಮಿತಾ
ಭಕ್ತ್ಯೈವ ಗುರುರಾಟ್ ಪ್ರೀತ್ಯೈ ಪಂಚಶ್ಲೋಕೀ ಭವತ್ವಿಯಂ

ಶ್ರೀಮದುತ್ತರಾದಿ ಮಠದ ಈ ಯತಿವರ್ಯರು ಶ್ರೀ ಸತ್ಯಬೋಧರ ಅನಂತರ ಪೀಠವೇರಿದವರು.

ಟಿಪ್ಪಣಿ: ಇಲ್ಲಿಯ ೬ ಶ್ಲೋಕಗಳಲ್ಲಿ (೧) ತಾವು ಪೂರ್ವಾಶ್ರಮದಲ್ಲಿಯೂ ಶ್ರೀ ವಾದಿರಾಜರ ಸೇವಾ ಮಾಡಿದ ವಿಷಯ (೨) ಶ್ರೀ ವಾದಿರಾಜರೇ ಮಧ್ವಮತ ಪ್ರಸಾರ ಮಾಡಲು ಅರ್ಹರು ಎಂದು ಅವರ ಗುರುಗಳಾದ ಶ್ರೀ ವಾಗೀಶರು ತಿಳಿದಿದ್ದರು (೩) ತಮ್ಮ ಸ್ವಪ್ನದಲ್ಲಿ ಕಾಣಿಸಿಕೊಂಡು ಶ್ರೀ ವಾದಿರಾಜರು ತಮಗೆ ಉಪದೇಶ ಮಾಡಿ ಅನುಗ್ರಹಿಸಬೇಕು (೪-೫) ಸೋದಾಕ್ಷೇತ್ರದಲ್ಲಿರುವ ದೈವಿಕ ಪರಿಸರ; ಹಾಗೂ (೬) ವೃಂದಾವನದ ಸುತ್ತಮುತ್ತ ಇರುವ ವಿಶಿಷ್ಟ ದೇವತಾ ಸನ್ನಿಧಾನ - ಇದೆಲ್ಲ ನನ್ನನ್ನು ಅನುಗ್ರಹಿಸಲಿ, ಎಂದು ಕೇಳಿಕೊಂಡಿದ್ದಾರೆ.

## ೩. ಕೀರ್ತನೆಗಳು

ಇಲ್ಲಿಯ ಮೊದಲಿನ ಕೀರ್ತನೆಯು (ನಂ. ೧೦) ಶ್ರೀ ವಾದಿರಾಜರ ಸಮಕಾಲೀನರಾಗಿದ್ದ ಶ್ರೀ ಬೇಲೂರು ವೈಕುಂಠದಾಸರಿಂದ ರಚಿತವಾದದ್ದು. ಶ್ರೀ ವಾದಿರಾಜರಂತೆಯೇ ಖ್ಯಾತರಾದವರು. ಒಮ್ಮೆ ಶ್ರೀ ವಾದಿರಾಜರು ಬೇಲೂರಿಗೆ ಹೋದಾಗ ದಾಸರ ತೊಡೆಯ ಮೇಲೆ ಭಗವಂತನು ಬಾಲಕೃಷ್ಣನ ರೂಪದಲ್ಲಿ ಮಲಗಿದ್ದನ್ನು ಕಂಡು ವಿಸ್ಮಯವಾಯಿತಂತೆ. ಆಗ ವೈಕುಂಠದಾಸರು ಹಾಡಿದ ಕೀರ್ತನೆಯಿದು.

(೧೦)

ಮಗುವು ಕಾಣಯ್ಯ ಮಾಯದ ಮಗುವು ಕಾಣಯ್ಯ
ಸುಗುಣಾ ವಾದಿರಾಜರೆ ಮೂಜಗವನುದರದೊಳಿಟ್ಟ ಪ

ಏಕಾರ್ಣವಾಗಿ ಸಕಲ ಲೋಕವಾಕಾರವಳಿಯಲೂ
ಏಕಮೇವಾದ್ವಿತೀಯವೆಂಬಾಗಮಕೆ ಸಮವಾಗೀ
ಶ್ರೀಕರಾಂಬುಜದಿಂ ಪಾದಾಂಗುಲಿಯ ಪಿಡಿದು ಬಾಯೊಳಿಟ್ಟು
ಶ್ರೀಕಾಂತ ವಟದೆಲೆಯ ಮೇಲ್ಮಲಗಿ ಬ್ರಹ್ಮನ ಪಡೆದಾ ೧

ಮಾಯಾಪೂತನಿಯ ಕೊಂದು ಕಾಯವ ಕೆಡಹಿ ಶಕಟನನು
ಸಾಯಬಡಿದು ವತ್ಸನ ಧೇನುಕನ ವೃಷಭನ
ನೊಯ್ಯನೊದ್ದು ಯಮಳಾರ್ಜುನರಿಗೆ ಸಾಯುಜ್ಯವನಿತ್ತು ತನ್ನ
ತಾಯಿಗೆ ತಾ ಮಣ್ಣು ಮೆದ್ದು ಬಾಯಿ ಬಿಚ್ಚಿ ತೋರಿಸಿದಾ ೨

ಕಡಹದಾ ಮರವನೇರಿ ಸಂಗಡಿಗರೊಂದಿಗೆ ಕಾಳಿಂದಿಯ
ಮಡುವಲಿ ಧುಮುಕಿ ಕಲಕಿ ಜಲವಾ ಆ ಕಾಳಿಂಗನಾ
ಪೆಡೆಯ ತುಳಿದು ಜಡಿಯಲವನಾ ಮಡದಿಯರು ಬೇಡಿಕೊಳ್ಳೆ
ಕಡಲಿಗಟ್ಟಿ ಬಂದು ಎನ್ನ ತೊಡೆಯ ಮೇಲೆ ಮಂಡಿಸಿದ ೩

ಬಳ್ಳಿಗಟ್ಟದುಡಿಯಲ್ಲಿ ಗುಲ್ಲಿಯ ಚೀಲಾವ ಸಿಕ್ಕಿಸಿ
ಕಲ್ಲಿಗಟ್ಬ್ಯೋಗರ ಕಂಬಳಿಯ ಕೋಲು ತುದಿಯೊಳು
ನಿಲ್ಲಿಸಿ ಹೆಗಲೊಳು ಕೊಂಬು ಕೊಳಲನು ಪಿಡಿದೂದುತ್ತ
ಗೊಲ್ಲರೊಡಗೂಡಿ ಆಡುತೆಲ್ಲ ಗೋವುಗಳ ಕಾಯ್ದಾ ೪

ಶ್ರುತಿತತಿಗಗೋಚರನು ಚ್ಯುತಿದೂರನಾದಿಮೂರ್ತಿ
ಚತುರ್ಮುಖಾದಿಶೇಷ ದೇವಾರಾಧ್ಯ ದೇವನು
ಕ್ಷಿತಿಗಧಿಕ ಬೇಲಾಪುರದ ಪತಿ ವೈಕುಂಠಕೇಶವನು
ಯತಿಯೆ ನೀ ನೋಡಲು ಶರಣಾಗತನ ತೊಡೆಯೊಳು ೫

(೧೧)

**ಆವ ಕಾರಣ ಮೂಗು ತಿರುಹಿದೆಯೋ ಶ್ರೀ ವಾದಿರಾಜೇಂದ್ರ** ಪ

ಆವಾವ ಬಗೆಯಿಂದ ನಾ ನೋಡೆ
ನಿನ್ನೊರತು ಗತಿ ಕಾಣೆನೊ ನಿನ್ನಾಣೆಗೂ ಅ.ಪ.

ಸತಿಯು ತಾ ತನ್ನ ಪತಿಯ ಕೂಡ ಹಿತವ ಬಯಸಿ
ಪತಿ ಬಂದು ಕರಪಿಡಿದು ಹಿತಿಸುವಾ ತೆರದಿ ಹಿತಿಸದೇ
ಮತ್ತಾವ ೧

ಕ್ಷಿತಿಯೊಳಗೆ ಇನ್ನಾರು ಹಿತವ ಬಯಸುವರಾರು ನಿನ್ನೊರತು ಪೇಳೋ
ಅಸಮ ಕರುಣಾಬ್ಧಿ ಶಿರಿಹಯವದನ ನಿನ್ನಾಧೀನನಾದ
ಬಳಿಕ ಎನ್ನುದಾಶಿಸುವರೇ ೨

ದಾನವಾದರೆ ಸಲಹೊ ಬೇಗ ಇರದಿರೆ ಬ್ಯಾಡೋ ಈಗ
ಶಿರಿ ಅರಸ ನಮ್ಮ ತಂದೆವರದಗೋಪಾಲವಿಠಲನ
ಸಹ ಬಾ ಬಂದು ಕಾಯದೆ ಮತ್ತಾವ- ೩

(೧೨)

**ಇದಿರ್ಯಾರೋ ಗುರುವೇ ಸಮರ್ಯಾರೋ**
**ಶ್ರೀಹಯವದನಪದ ಪ್ರಿಯ ವಾದಿರಾಜ** ಪ

ಸಿರಿನಿಲಯನ ಗುಣಗಳ ಸ್ಮರಿಸುತ
ಗುರು ಮಧ್ವಮುನಿಪನ ಮಹಿಮೆಯ ಪೊಗಳುತ
ನೆರೆದಿದ್ದ ಮಾಯ್ಮದ ಕರಿಗಳ ಶಿರವನು
ಭರದಿ ಭೇದಿಪ ಬಲವಿಬುಧ ಕೇಸರಿಯೇ ೧

ಹರಿತತ್ವಸಾರ ಸಜ್ಜನರಿಗೆ ತಿಳಿಯದೇ
ಪರಿಪರಿ ಕುಸಮಯ ತಮ ಕವಿಯಲು ನೀ
ಸರಸಭಾರತಿ ಮೊದಲಾದ ಗ್ರಂಥಗಳನು
ವಿರಚಿಸಿ ತಮ ಹರಿಸಿದ ದಿನಕರನೇ ೨

ಸೋದೆಯ ಪುರದಲಿರುವ ಹಯವದನನ
ಮೋದದಿ ಭಜಿಸುತ ಈ ಧರೆಯೊಳ್ ಪೂರ್ಣ-
ಬೋಧತೀರ್ಥರ ಪಾದಸೇವಕರಿಗೆ
ಆದರ ಮಾಳ್ಪ ಯತಿಕುಲ ಶಿರೋಮಣೀ ೩

............................................................ ೪

ಮುದ್ದು ಲಕ್ಷ್ಮೀಶ ವೆಂಕಟವಿಠಲನ
ಹೊದ್ದಿದ ಭಕ್ತರ ಸಂತಾಪ ಕಳೆಯುತ
ಮಧ್ವಮುನಿಯ ಮತ ದುಗ್ಧವಾರಿಧಿಯೊ-
ಳುದ್ಭವಿಸಿದ ಪೂರ್ಣ ಶುದ್ಧ ಚಂದ್ರಮನೇ ೫

(೧೩)

(ಉದಯರಾಗ)

ಏಳು ಶ್ರೀ ಗುರುರಾಜ ಏಳು ವಾದೀರಾಜ
ಏಳು ಶ್ರೀಹಯವದನನ ಪ್ರೀಯ ಯತಿರಾಜ
ಏಳಯ್ಯ ಬೆಳಗಾಯಿತು. ಪ

ಶಿಷ್ಟ ಬ್ರಾಹ್ಮಣನಾಗಿ ಶ್ರೇಷ್ಠ ರುಕ್ಮಿಣಿ ಬರೆದ
ಓಲೆಯನೊಯ್ದು ಶ್ರೀನಾಥಗೊಪ್ಪಿಸಿ
ಪ್ರೇಮದಿಂದಲಿ ಅವರು ಆಡಿದಾ ಆಟವನು
ಭಾವಭಕುತೀಲಿಂದ ನೋಡಿ ನಲಿಯಬೇಕು ೧

ಮಾಯವಾದದ ಮತವ ಖಂಡಿಸುತಲೀ ಶ್ರೀ-
ಮಧ್ವಮತದಾ ಭೇರಿ ಹೊಡಿಸಬೇಕು
ಸದ್ಭಕ್ತಿ ಜ್ಞಾನವನು ನಿರುತ ಸಜ್ಜನರಿಗೆ
ಉಪದೇಶಿಸಲು ಬೇಕು ಭಾವೀ ಮರುತಾ ೨

ಸಜ್ಜನರ ಉದ್ಧಾರಕೆಂದು ಸೋದೆಲಿ ನಿಂದು ಶ್ರೀ-
ಮುದ್ದುವಿಠಲನ ಪಾದ ಭಜಿಸುತ ನಿತ್ಯ-
ಅಜ್ಞ ಜನರು ಬಂದು ಬೇಡಿದರೆ ಅವರಿಗೆ
ಸುಜ್ಞಾನ ಭಕ್ತಿ ಕೊಟ್ಟುದ್ಧರಿಸಬೇಕು ೩

(೧೪)

........................................................................ ಪ

ಓತಪ್ರೋತದಿ ಭಜಿಪ ನಿಮ್ಮಯ ಖ್ಯಾತಿ ವರ್ಣಿಸಲೆಷ್ಟರವನೋ ೧

ರಾಜರಾಜರಿಂ ಪೂಜೆಗೊಂಬುವನೇ ಮಹರಾಜ ಗುರುವೇ
ರಾಜಭೂತನ ಬಿಂಬನಾಗಿರುವವನೇ
ನೈಜ ಭಾವದಿ ಭಾವಿಸುವವರ ಮಾಜದಲೆ ನೀ ಕಾದುಕೊಳ್ಳುವಿ
ತೇಜದಲಿ ನೀ ಬೆಳಗುತಿಪ್ಪೆಯೊ ತ್ರಿಜಗವಂದ್ಯನ ದಾಸಶ್ರೇಷ್ಠನೆ ೨

ಸ್ವಪ್ನ ಆಖ್ಯಾನವನು ಪೇಳಿದೆಯೊ ನೀ ಏಡಮೂಕಗೆ
ಸ್ವಪ್ನದಲಿ ನೀ ಬಂದು ಕರುಣೆಯಲೀ
ಅಪ್ಪ ಲಕ್ಷ್ಮೀವರನ ಕೃಪೆಗೆ ನೀನೊಪ್ಪಮಾಡಿಸು ಎನ್ನ ಕಲ್ಮಶ
ಕಪ್ಪು ಕಳೆಯುತ ದೇವ **ಪಂಢರಿನಾಥವಿಠಲನ** ಭಕ್ತಾಗ್ರಣಿಯೆ ೩

(೧೫)

**ಕಂಗೊಳಿಪರು ನೋಡೆ ಸೋದೇ ವೃಂದಾವನದಿ**
ಮಂಗಳ ಮಹಿಮ ಶ್ರೀಹಯವದನನ ಸಹಿತ ಪ

ಪಂಚ ವೃಂದಾವನದೀ ಪಂಚ ಪ್ರಾಣರ ಸಹಿತ
ಪಂಚ ಮೂರುತಿಪಾದ ನಿರ್ವಂಚನೆಲಿ ಸೇವಿಸುತ ೧

ಬಾದರಾಯಣರ ಪ್ರಿಯಾ ಭಾವಿ ಮಾರುತಿರಾಯ
ಮೋದತೀರ್ಥರ ಮತದ ಭೇರಿ ಮೊಳಗಿಸುತ ೨

ಅಷ್ಟಭುಜ ನಾರಾಯಣನ ಶ್ರೇಷ್ಠ ದಾಸಾಗ್ರಣಿಯ ಮನ
ಮುಟ್ಟಿ ಸೇವಿಸುವವರಾ ಕಷ್ಟ ಬಿಡಿಸುತಲಿ ೩

ತಿಂಗಳಿನ ಬೆಳಕಿನಂತೆನ್ನ ಮನಮಂದಿರದಿ
ಸಂಗೀತಸುಧೆ ಸುರಿಸುತಾನಂದದೀ ೪

ಧನ್ವಂತ್ರಿ ಸಹಿತ ಶ್ರೀಮುದ್ದುವಿಠಲನೆ-
ನ್ನಂತರಂಗದಿ ತೋರಿಸುವರಿವರು ೫

(೧೬)

**ಕಂಡೆ ಕಂಡೆ ರಾಜರ ಕಂಡೆ ಕಂಡೆ** ಪ

ಕಂಡೆ ಕಂಡೆನು ಕರುಣ ನಿಧಿಯನು
ಕಂಗಳಂಜಲಿ ಮಾಡಿ ಮುಗಿವೆನು
ಲಂಡ ಮಾಯಿಗಳ ಗುಂಡಿಗೆ ಒಡೆಯಲು-
ದ್ದಂಡ ಮಾರುತಿ ಪದಕೆ ಬರುವನ ಅ.ಪ.

ಪಂಚವೃಂದಾವನದಿ ಮೆರೆಯುವ
ಪಂಚಬಾಣನ ಪಿತನ ಸ್ಮರಿಸುವ
ಪಂಚನಂದನ ಮುಂದೆ ಆಗುತ
ಮಿಂಚಿನಂದದಿ ಪೊಳೆವ ಮಹಿಮಾನ ೧

ಪಂಕ ಪಾತಕ ಕಳೆವ ದೇವನ
ಪಂಕಜಾರಿ ನಿಭೇಂದುವಕ್ತ್ರನ ಆ-
ತಂಕವಿಲ್ಲದೆ ಭಜಿಪ ಸುಜನರ
ಶಂಕೆ ಬಿಡಿಸುವ ಶಂಕರೇಶನ ೨

ಭಜಿಸುವವರಿಗೆ ಭಾಗ್ಯ ಕೊಡುವನ
ಋಜುಗಣೇಶಾಮರೇಂದ್ರ ವಂದಿತ
**ನಿಜಪುರಂದರವಿಠ್ಠಲೇಶನ**
ಭಜನೆ ಮಾಡುವ ಭಾವಿ ಮರುತರ ೩

---

ಟಿಪ್ಪಣಿ : ಇವರು ೧೯ನೇ ಶತಮಾನದ ಜನಪ್ರಿಯ ದಾಸರು. (ಪುರಂದರದಾಸರ ಮಕ್ಕಳೇನಲ್ಲ) ೧೯೫೦ರ ಒಂದು ಏಕಾದಶಿಯ ದಿವಸ ಕುಂದಾಪುರದ ಶ್ರೀ ಲಕ್ಷ್ಮೀಂದ್ರತೀರ್ಥ ಸ್ವಾಮಿಗಳೂ ಪಂಡಿತ ಜಾಲೀಹಾಳ ಶ್ರೀನಿವಾಸಾಚಾರ್ಯರೂ ಸೇರಿ ಸುಶ್ರಾವ್ಯವಾಗಿ ಹಾಡಿದರಂತೆ. ಆಗ ಮಲಗಿದ್ದ ನೆರೆಮನೆಯವರು ಎದ್ದು ಬಂದು ಕೇಳಿ ಸಂತೋಷಿಸಿದರಂತೆ.

(೧೭)

ಕರುಣದಿ ನೋಡೋ ಮದ್ಗುರು ವಾದಿರಾಜ
ನಂಬಿದ ಭಕ್ತರ ಸುರತರುವೇ ಪ

ಪರಿಪರಿ ಭವಸಾಗರದಿ ಮುಳುಗುವ
ತರಳನ ಮರೆವುದು ಥರವೇ ಅ.ಪ

ವಾಗೀಶಮುನಿ ಕರಪದ್ಮಸಂಜಾತ ಹೇ
ಭಾಗವತಾಗ್ರಣಿ ಭರದಿ
ಆಗಮನಿಗಮವಿನುತ ಹಯವದನನ
ಬೇಗ ಒಲಿಸಿದೆ ನೀ ಮುದದಿ
ಯೋಗ ಜಿತಾಸನನಾಗಿರುವನೆ ತಲೆ-
ಬಾಗುವೆ ಭಯವಳಿ ತ್ವರಿತ ೧

ವಾದದೊಳ್ ವಾದಿಗಳನೇ ಗೆದ್ದು ಗುರುಮತ
ಸಾಧಿಸಿದೆಯೋ ಬಲವಂತ
ಸಾಧು ಸೇವಿತ ನಿನ್ನ ಪಾದವ ನಂಬಿದೆ, ಭವ
ಬಾಧೆ ಕಳೆಯೋ ಮಹಂತ
ಕ್ರೋಧರಹಿತ ಪಂಚ ಭೇದ ಸುಜ್ಞಾನವ
ಬೋಧಿಸುವ ದಯವಂತ ೨

ಅತಿ ವಿಮಲನೆ ನಿನ್ನ ಸ್ತುತಿಸಲರಿಯೆ ನಾನು
ಮತಿವಂತನೈ ಮಹಾದಾತಾ
ಸತತ ಬೇಡುವೆನು ಶ್ರೀಪತಿ ಭಜನೆಗೆ ಮನ
ಜಿತವಾಗಿ ಇರಲಯ್ಯ ತಾತ
ಕ್ಷಿತಿಯೊಳು ಕಂಡ ದುರ್ಮತಿಗಳ ಬಿಡಿಸೋ-
ದತಿ ಅಧಿಕಮೇನೊ ಅನಾಥನಾಥ ೩

ಪತಿತಪಾವನ ರಮಾಪತಿವಿಠಲನವ-
ರತನೊಳ್ಪ ಲಾತವ್ಯ ಖ್ಯಾತ

(೧೮)

**ಕರುಣಾರ್ಣವ ಶ್ರೀ ಗುರುವರ**
ಕರುಣಿಸೊ ನೀ ಎನ್ನ
ಕರುಣಾಗತ ರಕ್ಷಾಮಣಿ ತವ
ಚರಣಾಂಬುಜ ತೋರಿನ್ನ ಪ

ಆನತಜನತತಿಜ್ಞಾನದ ಎನ್ನ
ಜ್ಞಾನವ ಕಳೆದಿನ್ನ
ಜ್ಞಾನ ಭಕುತಿ ಸುವಿರಕುತಿ (ಯ) ನಿತ್ತು
ಮಾನದಿ ಸಲಹೆನ್ನಾ ೧

ಕಾಮಿತ ಫಲಪ್ರದ ಕಾಮ್ಯಾರ್ಥವನೂ
ಕಾಮಿಪ ಜನಕಿನ್ನ
ಪ್ರೇಮದಿ ಅವರಭಿಕಾಮವ ಪೂರ್ತಿಸಿ
ಕಾಮಧೇನು ತೆರ ತೋರುವಿ ಘನ್ನ ೨

ಶಿಷ್ಟೇಷ್ಟಪ್ರದನಿಷ್ಟಘ್ನನೆ ನೀ
ಕಷ್ಟವ ಪರಿಹರಿಸಿನ್ನಾ
ಎಷ್ಟೆಂಥೇಳಲಿ ಸೃಷ್ಟಿಯೊಳಗೆ ನಿನ್ನ
ಶ್ರೇಷ್ಠ ಮಹಿಮೆಗಳನ್ನಾ ೩

ಶಿಷ್ಟನೆ ನೀ ಪರಮೇಷ್ಟಿಯ ಸತ್ಪದಾ –
ಧಿಷ್ಟತನೆಂದಿನ್ನಾ
ಪ್ರೇಷ್ಠನೆ ಎನ್ನಯಭೀಷ್ಟೆಯನಿತ್ತು
ಶ್ರೇಷ್ಠನ ಮಾಡಿನ್ನಾ ೪

ಪಾತಕವನಕುಲ ವೀತಿಹೋತ್ರ ಸುಖ –
ದಾತನೆ ನೀ ಇನ್ನಾ
ಈ ತೆರ ಮಾಡದೆ ನೀತ **ಗುರುಜಗ –**
**ನ್ನಾಥವಿಠಲ** ಪ್ರಪನ್ನಾ ೫

(೧೯)

**ಕರುಣಿಸೋ ಶ್ರೀ ಗುರುರಾಜ ಬರದ್ಯಾಕೆ ಎನ್ನೊಳು ದಯ** ಪ

ದಯಮಾಡೊ ಶ್ರೀ ಗುರುರಾಜ ಹಯವದನನಿಗತಿಪ್ರಿಯ ಅ.ಪ

ಒಲಿಸಾದೆ ವಿದ್ಯೆಗಳನ್ನು ಬಾಲತನದಿ ಬಹುಕಾಲ ಕಳೆದೆ
ಕುಲೀಲೆಗಳಲ್ಲಿ ಛಲವ್ಯಾಕೆ ಎನ್ನೊಳು ಬಲ್ಲಿ ೧

ಜ್ಞಾನರಹಿತ ಪ್ರಾಯದಿ ಮಾನಾಪೇಕ್ಷೆಯನೆ ಮಾಡಿ
ಮೌನಿ ವೇಷವನೆ ಧರಿಸಿ ಹೀನಾಚರಣೆಯಲ್ಲಿರುವೆ ೨

ಪತಿತಾಗ್ರಣಿಯು ನಾ ಬಲ್ಲಿ ಪತಿತಪಾವನ ನೀ ಬಲ್ಲೆ
ಗತಿಪದ ಮತಿಯನಿತ್ತು ರತಿಪತಿಪಿತನ ತೋರಿ ೩

ಬಲ್ಲವರನು ರಕ್ಷಿಪುದು ಅಲ್ಪ ಬಿರುದು ಘನವಾದ್ದು
ಅಲ್ಪನ ಪೊರೆಯಲು ನಿನಗೆ ಒಳ್ಳೆ ಕೀರುತಿ ಬರುವುದು ೪

ಸರ್ವಜ್ಞ ನಿನಗೆ ನಾನೆಂತೋ ಉರ್ವಿಭಾರನು ನಾ ಪೇಳ್ವೆ
ಪರ್ವ ಪಂಚಕಗಳ ಕಳೆ ಶ್ರೀನರಹರಿಯನೆ ಪೊಂದಿಸಿ ೫

(೨೦)

**ಕೃಪೆಯಲಿಂದಲಿ ಕಾಯಬೇಕಯ್ಯ।**
ಶ್ರೀ ಸೋದೆನಿಲಯ ಕೃಪೆಯಲಿಂದಲಿ ಕಾಯಬೇಕಯ್ಯ ಪ

ಕೃಪೆಯಲಿಂದಲಿ ಕಾಯಬೇಕೈ ।
ವಿಪ ಅಹಿಪ ಸುರಪಾದಿ ವಂದ್ಯನ ।
ವಿಪುಲ ಪಾಪಾಳಿಗಳ ಹರಿಸೀ ।
ಸುಪಥ ಸದ್ಗತಿಗೆನ್ನ ಒಯ್ದು ಅ.ಪ.

ಗೌರಿದೇವಿಯ ಉದರಸಂಭವನೆ । ಹಯಾಸ್ಯನಂಘ್ರಿ
ಸರಸಿರುಹದಲಿ ಮಧುಪನೆನಿಸಿದನೆ ॥
ದ್ವಾರಕಾದಿ ಕ್ಷೇತ್ರ ಚರಿಸುತ ।
ಘೋರ ಹಿಮಗಿರಿ ಸೇತುಯಾತ್ರೆಯ
ಸಾರಿ ಸತ್ತೀರ್ಥಪ್ರಬಂಧವ ।
ಧೀರ ನೀ ರಚಿಸುತ್ತ ಮೆರೆದೆಯೊ ೧

ಲಕ್ಷಿಸುತ್ತಲಿ ಮಾತೆ ಬಿನ್ನಪವ । ಮಹಭಾರತಸ್ಥ
ಲಕ್ಷಪದ ಬಹು ಕ್ಲಿಷ್ಟವೆನಿಸೂವ ॥
ಲಕ್ಷಣದಿ ಸದ್ಯುಕ್ತ ಪದಗಳ ।
ಈಕ್ಷಿಸುತ ಅವಕರ್ಥ ಪೇಳುತ
ಲಕ್ಷಸದ್ಧಾಭರಣ ಮಾಲಿಕೆ ।
ಲಕ್ಷ್ಮೀಪತಿ ಹಯಾಸ್ಯಗರ್ಪಿತ ೨

ಸೇವಿಸುತ್ತಿಹ ವಿಪ್ರನಾದವನ । ಕೌಟಿಲ್ಯ ಕಂಡು
ತೀವ್ರದಿಂದಲಿ ಶಾಪವಿತ್ತವನ ॥
ಭಾವ ತಿಳಿದು ಬೊಮ್ಮರಾಕ್ಷಸ ।
ಭಾವ ತಾಳೆಂದೆನುತ ಪೇಳಲು
ತೀವ್ರ ಯಾಚಿಸೆ ಕ್ಷಮೆಯ ಮಂತ್ರವ ।
ಆವ ಆಕಾಮ್ಯೈವ ನೊರೆದೆ ೩

ಮರಳಿ ಉತ್ತರ ಯಾತ್ರೆಯಲ್ಲಿರಲು । ಗುರು ವಾದಿರಾಜರ
ಅರಿಯದಲೆ ತನ್ಮಂತ್ರ ಪೇಳಲು ॥
ಒರೆದರೂ ರಂಡೇಯ ಮಗ ನೀ ।
ನಿರುತಿರುವೆನ ಸ್ನಾತ ಕಾರ್ತಿಕ
ಮರಳಿ ಮಾಘಾಷಾಢ ವಿಶಿಖದಿ ।
ಹರಿಯಿತೂ ನಿನ ಶಾಪವೆಂದರು ೪

ಆತು ಗುರುಪದ ಕ್ಷಮೆಯ ಪ್ರಾರ್ಥಿಸಲು । ಗುರುರಾಜರಾಗ
ಭೂತರಾಜನು ನೀನೆ ಎನ್ನುತಲು ॥
ಖ್ಯಾತಿ ಪೊಂದುತ ಭಾವಿರುದ್ರನೆ ।

ಪೊತ್ತು ಎನ್ನಯ ಮೇನೆ ಮುಂಗಡೆ
ಕೌತುಕವ ತೋರುತ್ತ ಮೆರೆವುದು ।
ಪೋತ ಭಾವದಿ ತಮಗೆ ಎಂದರು ೫

ಆಖಣಾಶ್ಮಕೆ ಸಮವು ನಿಮ ಚರಣ । ಭಾವಿ ಮರುತರೆ
ಪಾಖಂಡ ಮತವೆಲ್ಲಿರಲು ಖಂಡನ ॥
ಸ್ವೀಕರಿಸಿ ಅರಸಪ್ಪ ರಾಜನ ।
ಕಾಕು ಶೈವನ ಖಂಡಿಸುತ್ತಲಿ
ಆಕೆವಾಳರ ಪೊರೆದು ದಶಮತಿ ।
ತೋಕನೆಂದೆನಿಸುತ್ತ ಮೆರೆದೇ ೬

ಭೂವಲಯದೊಳು ಕಾರ್ಯ ಪೂರೈಸಿ । ಬದರಿಯಿಂದಲಿ
ಭಾವಿ ಶಿವನಿಂ ಪ್ರತಿಮೆ ರಥ ತರಿಸೀ ॥
ದೇವ ಗೃಹ ಸಹವಿರುವ ವಿಗ್ರಹ ।
ತ್ರೈವಿಕ್ರಮನ ಸಂಸ್ಥಾಪಿಸುತ್ತ
ಭಾವ ಭಕ್ತಿಯಲಿಂದ ಉತ್ಸವ ।
ತೀವರದಿ ರಚಿಸುತ್ತ ಮೆರೆದೆ ೭

ಹಂಚಿಕಿಂದಲಿ ಪೂರ್ವರಚಿತೆನ್ನ । ವೃಂದಾವನಂಗಳು
ಪಂಚ ಸಂಖ್ಯೆಯಲಿಂದ ಮೆರೆವನ್ನೆ ॥
ಮುಂಚೆಯೇ ಸ್ಥಾಪಿತವು ಎನ್ನುವ ।
ಪಂಚರೂಪೀ ವ್ಯಾಸ ಸಮ್ಮುಖ
ಸಂಚುಗೊಳಿಸೀ ಸ್ಥಾಪಿಸುತ್ತ ।
ಕೊಂಚವಲ್ಲದ ಕಾರ್ಯ ರಚಿಸಿದೆ ೮

ಯುಕ್ತಿಮಲ್ಲಿಕೆ ರುಕ್ಮಿಣೀಶ ಜಯ । ಗುರ್ವರ್ಥ ದೀಪಿಕೆ
ಮತ್ತು ಪರಿಪರಿ ಶಾಸ್ತ್ರ ಗ್ರಂಥಗಳ ॥
ವಿಸ್ತರಿಸಿ ಭುವನದಲಿ ಮೆರೆದೆ ।
ಉತ್ತಮೋತ್ತಮ ದೇವ ದೇವನು
ಕರ್ತೃ ಶ್ರೀಹಯಮುಖನು ಎನ್ನುತ ।
ವತ್ತಿ ಪೇಳುತ ವ್ಯಾಪ್ತಿ ಸಾರಿದೆ ೯

ಶಿಷ್ಟ ಜನ ಸಂಸೇವ್ಯ ಧೀವರನ । ಶಮದಮಾನ್ವಿತ
ಕಷ್ಟಹರ ಕಾರುಣ್ಯ ಸಾಗರನೇ ।
ಕುಷ್ಟ ಅಪಸ್ಮಾರ ರೋಗದ ।
ಅಟ್ಟುಳಿಯ ಕಳೆಯುತ್ತ ಮೃತ್ತಿಕೆ
ಸುಷ್ಠು ಸೇವನೆಯಿಂದ ಭಕ್ತರ ।
ಇಷ್ಟವನೆ ಸಲಿಸುತ್ತ ಮೆರೆವೆ ೧೦

ಕಡೆಯ ಮಾಸಾಸಿತವು ತೃತಿಯದಲಿ । ನೀನೆ ಸ್ವೇಚ್ಛೆಲಿ
ನಡುವೆ ವೃಂದಾವನವ ಪೊಕ್ಕಲ್ಲಿ ॥
ಧೃಡದಿ ಬಿಂಬ ಹಯಾಸ್ಯ **ಗುರುಗೋ–** ।
**ವಿಂದವಿಠಲ** ಧ್ಯಾನದಿರುತಲಿ
ಇಡುತ ಅಂಶವ ಸುರಪ ವಾಹನ ।
ಬಿಡದೆ ಏರುತ ಸಾರ್ದೆ ಹರಿಯನು ೧೧

(೨೧)

**ಕೇಳಿರೊ ಜನರು ಈ ಮಹಿಮೆಯ ಪೊಗಳಿರೊ ಬೇಕಾದವರು** ಪ

ಕೀಳ ಬುದ್ಧಿಯ ಬಿಟ್ಟು ಆಲಯದೊಳಿರುತಿರಲು
ಶೀಲ ಸದ್ಗುಣ ಗುರು ವಾದಿರಾಜನ ಕಂಡೆ ಅ.ಪ

ನಾ ಮಹದುರ್ಬುದ್ಧಿ ಬಿಡಿಸಿದ ಈ ಮಹ ಗುರು
ಪೇಳಿ ಪೂರ್ವ ಜನ್ಮದ ಸುದ್ದೀ
ಈ ಮಹಿಮಿ ಇನ್ಯಾರಲ್ಲ್ಯಂಟು ಯಿದರಿಂದ
ಈ ಮಹರಾಯನ ಪಾದಕ್ಕೆ ಎನ್ನಣಿಗೆ ಗಂಟು ೧

ಈತನ ಮಹಿಮೆ ಕೇಳುವೆ ಕಿವಿಯಿಂದೀ
ಸುಧೆಯ ಪಾನವ ಮಾಡುವೆ
ತಾತ ಈತನೆ ಅಂಬುವೆ
ಮತ್ತೆ ಮತ್ತೆ ಸ್ಮರಿಸಿ ಡಂಗುರ ಹೊಯಿಸುವೆ ೨

ಕಣ್ಣಿಂದ ಕಂಡ ಮ್ಯಾಲ ಅನ್ಯರ ಭಯ ಎಲ್ಲೆದ ಇನ್ನ ಮ್ಯಾಲ
ಕುನ್ನಿ ಖಳ ದುರ್ವಾದಿ ಮಾಯಿಮತ
ವನ ಕುಠಾರಿ ಗುರುರಾಜಾ ನಮ್ಮ ತಾಯಿ ೩

ನಮಸ್ಕಾರ ಮಾಡಿ ದೇಹ ರಕ್ಷಿಸೊ ಯೆಂದು ನಾ
ಮನಸಾ ಬೇಡಿಕೊಂಬೆ
ಮಮ ಮೂಲ ಗುರು ನೋಡೀತಾ
ವೃಂದಾವನದಿ ಸುಮನ ಸಾರ್ಚಿತ ಸನ್ನಿಹಿತಾ ೪

ಸ್ತೋತ್ರ ಮಾಡುವೆ ಪ್ರೇರಿಸಿದಷ್ಟು ಎನ್ನ ಜಿಹ್ವೆ
ಸಾರ್ಥಕಾಯಿತೋ ಕೇಳಿರೊ ಜನರಷ್ಟು
ನೇತ್ರದಿ ನೋಡಿದೆ ಇಂದು ಪರಮ ಗುಟ್ಟು ಸ-
ತ್ಪಾತ್ರರಿಗೆ ತಿಳಿಸುವೆ ಭಕ್ತಿಯಿಟ್ಟು ೫

ನಾಶಿಕದ ಶ್ವಾಸಭೇದ ಮೂರು ವಿಧ ಪ್ರೇರಿಸುವ ವಾದಿರಾಜ
ಹುಸಿಯೆಂದು ನಾ ತಿಳಿದಿದ್ದೆ ಸ-
ಹಿಸಿ ಸಲಹಿದ ದೃಢ ಭಕ್ತಿಲಿ ನಂಬಿ ಬಂದೆ ೬

ವಿಷಯಾಸೆಗೆ ಪೋಗುವ ಮನ ಪಿಡಿದು
ನಿಲ್ಲಿಸಿದೀತನ ಪಾದಕಮಲದಿ
ಶಿಶುವಿಗೆ ಸುಧಿ ಎರೆದಂತೆ
ಭಾವಿ ಶಶಿಧರ ಸೇವ್ಯ ನುಡಿದು ನುಡಿಸುವ ಕರುಣದಿ ೭

ಶ್ರವಣ ಕೀರ್ತನ ಸ್ಮರಣ ಈ ಗುರ್ವಂತರ್ಯಾಮಿ
ಭೂವರಹ ಹಯಮುಖ ಶ್ರೀನಿವಾಸನ ಪಾದ
ಸೇವನ ಅರ್ಚನ ವಂದನ ದಾಸ್ಯ ಸಖ್ಯಾತ್ಮ ನಿವೇದನ ೮

ಮನನ ಚಿಂತನ ಧ್ಯಾನ ಅನುಗಾಲ ಎನಗಿದೆ ಸುಸಾಧನ
ತನು ದಂಡಿಸಲಿಲ್ಲವೋ
ಘನ ತೀರ್ಥಕ್ಷೇತ್ರಕ್ಕೆ ತಿರಿಗಿಲ್ಲವೊ

ಮುನಿವರ ವಾದಿರಾಜಾ ಎನ್ನುದ್ಧರಿಸಿದ ಈಗ
ಲಾತವ್ಯನೆಂಬುದ ನಿಜ
ಭಾವಿವಾಯು ನಿಜ ನಿಜ ನಿಶ್ಚಯ ಪೊಗಳುವೆ ೬

(೨೨)

**ಕೋಲೋ ಕೋಲೆನ್ನ ಕೋಲೆ ಕೋಲು ಮುತ್ತಿನ ಕೋಲು**
ಶ್ರೀ ಗುರು ನಿನ್ನ ಬಲಗೊಂಬೆ ಕೋಲ ಪ

ಕೋಲೂ ಶ್ರೀ ಗುರು ನಿನ್ನ ಬಲಗೊಂಬೆ ನಿನ್ನ ಪಾದ
ಏಕಚಿತ್ತಾದಲ್ಲಿ ಬಲಗೊಂಬೆ ಕೋಲ ಅ.ಪ

ರಂಗರಾಜನ ಪಾದ ಭೃಂಗಾನೆಂದೆನಿಸುತಾ
ಪಂಚರೂಪಾದಿ ಮೆರೆವೋನ ಕೋಲು
ಪಂಚರೂಪಾದಿ ಮೆರೆವೋನ ಭಾವೀ
ಪಂಚಪ್ರಾಣಾನಾ ಬಲಗೊಂಬೆ ಕೋಲ ೧

ಮಂದಜಾಸನ ಪದ ಪೊಂದುವನಾ ಕಂಡ
ವಾದೀರಾಜಾಖ್ಯನ ಬಲಗೊಂಬೆ ಕೋಲ
ವಾದೀರಾಜಾಖ್ಯನ ಭೂತಾಪತಿಯೆಂದು
ಆರ್ಯನ್ನ ಮೊದಲೇ ಬಲಗೊಂಬೆ ಕೋಲ ೨

ಕುಂದುಕಂಠನ ಕೊರಳಿಗ್ಹಾರ ಪದಕವ ಹಾಕಿ
ಪರಿಪರಿಯಿಂದಾ ಮೆರೆಸೋಣ ಕೋಲ
ಪರಿಪರಿಯಿಂದಾ ಹಾರ ಪದಕವ ಹಾಕಿ
ಧೀರನ್ನ ಮೊದಲೇ ಬಲಗೊಂಬೆ ಕೋಲ ೩

ಕೆಂಡಗಂಣವ ಕಂಡು ರುಂಡ ಹಾರವ ಹಾಕಿ
ಪರಿಪರಿಯಿಂದಾ ಭಜಿಸೋಣ ಕೋಲ
ಪರಿಪರಿಯಿಂದಾ ರುಂಡ ಹಾರವ ಹಾಕಿ
ಮಂಡೇ ನದೀಧರನ ಬಲಗೊಂಬೆ ಕೋಲ ೪

ಅಮರೇಂದ್ರ ಲೋಕದಿ ಶಿವರಾಜ ಧೊರಿಗೆ
ಪರಿಪರಿಯಿಂದ ಸೇವಿಪರು ಕೋಲ
ಪರಿಪರಿಯಿಂದ ಸೇವೆಯಾಗೊಂಬಂಥ
ವಾದಿರಾಜರ ದಾಸ ವಾದಿರಾಜಾಖ್ಯನ ಬಲಗೊಂಬೆ ಕೋಲ ೫

ನಂದಿವಾಹ ಕಂದ ಪದಕೆ ಬರೊವಂಥ
ಧೀರ ವೃಂದಾವನಾರ್ಯರ ವಂದಿಪೆ ಕೋಲ
ಧೀರ ವೃಂದಾವನಾರ್ಯರ ಚಾರು ಚರಣವ
ಬಲಗೊಂಬೆ ಕೋಲ ೬

ಮೂರು ಮಂದಿ ಮಧ್ಯೆ ಮಾತಾಡುತಿಪ್ಪ
ದಿಟ್ಟತನದಿ **ತಂದೆವರದಗೋಪಾಲವಿಠ್ಠಲನ**
ದಿಟ್ಟಾತನದಿ ಬಲಗೊಂಬೆ ಕೋಲ ೭

(೨೩)

**ಗುರುರಾಜರ ನಂಬಿರೋ ಸಾರುವೆ ನಾ**
ಸಾರುವೆ ನಾ ಸಾರುವೆ ನಾ ಪ

ಗುರು ವಾದಿರಾಜರ ಚರಣ ಸ್ಮರಣೆಯಿಂದ
ದುರಿತ ರಾಶಿಗಳೆಲ್ಲ ಪರಿಹಾರವಾಗುವುದು ಅ.ಪ

ಕರುಣಾಸಾಗರರಿವರು ಸ್ಮರಿಪರಘ ಸ್ಮರಿಸದೆ ಪರತತ್ವವರಿದು
ಬಾರಿ ಬಾರಿಗೊದಗಿದಪಾರ ಸಂಶಯ
ದೂರಗೈಸಿ ಮುರಾರಿ ಚರಣವ ತೋರ್ಪ
ಸುರರಿಗೆ ಮರುತರೆನಿಪರು ಬರುವ ಕಲ್ಪಕೆ ೧

ಗುರು ವಾದಿರಾಜರೆಂಬ ಸುರತರು
ಇರುವುದು ಸೋದಾಪುರದಿ
ಅರಿತು ನಿರುತದಿ ಪರಮ ಭಕುತಿಯಲಿ
ಸೇರಿ ಸೇವೆಯ ಮಾಳ್ಪ ಸುಜನಕೆ

ಬೀರುವರು ಪುರುಷಾರ್ಥಗಳನು
ಪಾರುಗಾಣರು ಸುರರು ಮಹಿಮೆಯ ೨

ಉಪಚಾರವಲ್ಲವಿದು ಶ್ರೀಪತಿಯಾಣೆ
ಗುಪಿತದಿಂದಿವರ ಮಂತ್ರ
ಜಪಿಸಿ ಭೂತರಾಜರೆಂಬೊರು
ತಾಪಹಾರಕರಾಗಿ ಸುಜನಕೆ
ತಪವ ಮಾಳ್ವರು ರುದ್ರ ಪದವಿಗೆ
ಶ್ರೀನರಹರಿ ಪಾದ ಇವರಲಿ ೩

(೨೪)

**ಗುರು ವಾದಿರಾಜ ತವ । ಚರಣಗಳಿಗಭಿನಮಿಪೆ**
ದೊರಕಿಸೆನಗ್ಧರಿಪಾದ । ಸರಸಿರುಹ ಗುರುವೇ ಪ

ಯತಿ ಕುಲಾಗ್ರಣಿ ದ್ವೈತ । ಮತ ಜನರ ಉದ್ಧಾರ
ಸತತ ನೀನೆಸಗುತಲಿ । ಪ್ರತಿರಹಿತ ನೆನಿಸೀ ।
ಮತ ಗ್ರಂಥ ವಿಸ್ತರಿಸಿ । ಯುಕ್ತಿಗಳ ಬೋಧಿಸುತ
ಹಿತದಿಂದ ಸಜ್ಜನಕೆ । ಗತಿ ತೋರಿ ಮೆರೆದ ೧

ತವ ಪಾದಾರಾಧನೋ । ತ್ಸವಕೆ ಕಾತರನಾಗಿ
ಹವಣಿಸಿರೆ ಜ್ವರದನೂ । ಭವವನ್ನೆ ಕೊಡಿಸೀ ।
ನೆವನದಲಿ ವಾರಿಸಿದೆ । ತವ ಪಾದ ಪೂಜೆಯನು
ಹವಣೆಗಳ ತಿಳಿಯೊ ನಾ । ದೈವಗತಿಯಂತೋ ೨

ಭಾವಿ ಮಾರುತ ನಿಮ್ಮ । ಭಾವ ತಿಳಿವರು ಯಾರು
ಓವಿ ನಿಮ್ಮಡಿಗಳನು । ಸ್ತವನ ಗೈದೂ ।
ಗೋವಳರ ಪ್ರಿಯ **ಗುರುಗೋವಿಂದವಿಠ್ಠಲನ**
ಭಾವದಲಿ ಕಾಣ್ವಂಥ । ಭಾವ ಕೊಡು ಸಂತ ೩

(೨೫)

ಗುರು ವಾದಿರಾಜ ರವಿಕೋಟಿತೇಜ
ಶರಣೆಂಬೆನಯ್ಯಾ ಸತತವು ಜೀಯಾ ಪ

ನಂಬಿದೆನು ನಿನ್ನ ದಯಾಸಂಪನ್ನ
ಸಂಭ್ರಮದಲೆನ್ನ ಪೊರೆಯೋ ಪ್ರಸನ್ನ ೧

ವೇದ ಶಾಸ್ತ್ರ ಬಲ್ಲ ಭಳಿರೆ, ಮಲ್ಲ
ಭೇದಜ್ಞಾನವೆ ಎಂಬೊ ನಿಜವೆಂಬ ಫಲಾ ೨

ಮಾಯಿಗಳ ಒದ್ದ ಮಮತೆಯ ಗೆದ್ದ
ಗಾಯನ ಪ್ರಸಿದ್ಧ ಗುಣದಲಿ ಇದ್ದ ೩

ನಾನಾ ಚರಿತ್ರೆ ತೋರಿದ ಪವಿತ್ರ
ಧ್ಯಾನಿಸಿ ಹರಿಯ ಗಾತ್ರದೊಳಿಟ್ಟ ಪಾತ್ರ ೪

ಸಂತತ ವಿರಕ್ತ ಜೀವನ್ಮುಕ್ತಾ
ಸಂತತ ಜಗದಾಪ್ತ ಹರಿನಾಮ ಭೋಕ್ತಾ ೫

ಸೋದೆಪುರವಾಸ ಸಾಧುಗುಣ ಭಾಸ
ಸದ್ಭಕ್ತರ ಪೋಷ ಮಧ್ವಮತೋಲ್ಲಾಸ ೬

ವಿಜಯವಿಠಲನ್ನ ನೆನೆಯುವ ಘನ್ನ
ತ್ರಿಜಗ ಹಯವದನ್ನ ಪರನೆಂಬೊ ಪೂರ್ಣ ೭

(೨೬)

ಗುರು ವಾದಿರಾಜಯತಿಯ ನೆನಸುವದು
ನಿರುತ ಕರುಣಿಪ ಮತಿಯ ಪ

ಆರ್ತನ ಸರಿದಾರುನವನ
ವರ್ತಮಾನವನೆ ಕೇಳಿ
ಕರ್ತೃತ್ವ ಪರಿಹರಿಸಿ ಸಂಸ್ಕೃತಿಯ
ಗರ್ತದಿಂದೆತ್ತಿ ನೋಳ್ಪ ೧

ದುರಿತ ರಾಶಿಗಳ ಸೀಳಿ ಹೊರತೆಗೆದು
ಮರುತ ಶಾಸ್ತ್ರವನೆ ಪೇಳಿ
ಪರಮಾರ್ಥ ಮಾರ್ಗವ ತೋರಿ ಸುಖಪಡಿಸಿ
ಧರೆಯೊಳಗೆ ಮೆರೆದ ಧೀರ ೨

ಸೌಂದರ್ಯಪುರಿಯ ವಾಸ ವರಪ್ರದ
ನಂದ ಸತ್ಕೀರ್ತಿ ಭೂಷ
ವಂದಿಸಿದವರಿಗೆ ಲೇಸಾಗಿ ಕೊಡುವ ಮು-
ಕುಂದನಂಘ್ರಿಯ ದಾಸ ೩

ತೀರ್ಥಯಾತ್ರೆಯನೆ ಮಾಡಿ ಹರಿಯ ಭೇ-
ದಾರ್ಥದಿಂದಲೇ ಕೊಂಡಾಡಿ
ಅರ್ಥಾಸೆಗಳ ಈಡಾಡಿ ಹಯಮೊಗನ
ಅರ್ಥಿಯಿಂದಲಿ ಪೂಜಿಪ ೪

ತ್ರಿಜಗದೊಳಿವರಿಗೆ ಎಣೆಗಾಣೆ
ಕುಜನಮತ ಸೋಲಿಸುವಲ್ಲಿ
ವಿಜಯವಿಠಲನೆ ದೈವವೆಂದು
ಧ್ವಜವೆತ್ತಿ ತಿರುಗಿದ ಮುನಿಪ ೫

ಟಿಪ್ಪಣಿ : ೧ನೆಯ ನುಡಿಯ ಇಂಗಿತಾರ್ಥ ತಿಳಿಯದು. ಸೌಂದರ್ಯಪುರಿ–ಸೋದಾಪುರಿ

(೨೭)

**ಗುರು ವಾದಿರಾಜರ ಪದ ಭಜಿಪರ ದುರಿತ**
**ಹರಣವಾಗುವುದು ತ್ವರಿತ** ಪ

ಅರಿತು ಮಹತಿಯನಿವರ ಸಂತತ
ನೆರೆ ಬಳಸಿ ಸೇವಿಸುವ ಭಕುತ-
ವರರ ಪ್ರತಿಪ್ರತಿಪದವು ಅವಿರತ
ಪರಮ ಪದಸೋಪಾನ ಖಚಿತ ಅ.ಪ

ವಾಗೀಶತೀರ್ಥರ ಭಾಗ್ಯಕರಸಂಜಾತ
ಯೋಗಿ ವ್ಯಾಸರಲಿ ಕಲಿತ
ಸಾಗಿ ಹಿಮಗಿರಿ ಸೇತುಪರ್ಯಂತ
ಆಗಮಾರ್ಥ ಯಥಾರ್ಥವೊರೆಯುತ
ನೀಗಿ ಘನತರ ತಿಮಿರ ಮಾಯ್ಮತ
ಮೊಗರುಗಿದು ಸ್ಥಾಪಿಸಿದ ಸುಮತ ೧

ಹರಿಗುರು ಮಧ್ವರ ಚರಣದೊಲೂಳಿಗವೆನಿಸಿ
ಭೂರಿ ಗ್ರಂಥಗಳ ರಚಿಸಿ
ಸರದಿ ಪದ್ಧತಿಪರಿಯ ಬದಲಿಸಿ
ಮುರಾರಿಯರ್ಚನೆ ಸುಭದ್ರಗೊಳಿಸಿ
ಹರಿಯ ಪದ ಪಾದ್ದನದಿ ಕೀರ್ತಿಸಿ
ಕರುಣಿಸಿದ ಪಾಮರರದ ತಪಸಿ ೨

ಈರಪಿತಾನಂತವಿಠಲಾ ಪರ ಭಾಗೀರಥೀಪಿತ
ಸಿರಿಯರ ಸ್ಥಾಪಿಸುತ
ಧೀರ ಭೂತರಾಜ ಸೇವಿತ
ಸಾರುತ ಸಶರೀರ ಮಿನುಗುತ
ಚಾರು ಪಂಚವೃಂದಾವನ ಸೇರುತ
ಮೆರೆದ ಸೋದಾ ಲಾತವ್ಯಮಹಿತ ೩

(೨೮)

**ಗುರು ವಾದಿರಾಜರ ಸ್ಮರಣೆಯ ಮಾಡಿರೊ** ಪ

ಗುರು ವಾದಿರಾಜರ ಸ್ಮರಣೆಯ ಮಾಡಲು
ದುರಿತ ಕಳೆದು ಮನಕೆ ಪರಮ ಹರುಷವೀವ ಅ.ಪ.

ಪೂರ್ಣಭೋಧರ ಮತ ವಾರಿನಿಧಿಗೆ ಸಂ-
ಪೂರ್ಣ ಸುಧಾಕರ ಸುಗುಣ ಗಂಭೀರ
ಕ್ಷೋಣಿ ಸುರೋತ್ತಮ ಕ್ಷೋಣಿಪಾಲಕ ಮಾನ್ಯ
ಜ್ಞಾನಿವರೇಣ್ಯ ಹಯಾನನ ಪರಚರಣ ೧

........................................................................ ೨

ಮಾನಸದೊಳಗಿಹ ಹೀನಮತಿಯ ಕಳೆ-
ದಾನಂದ ಕೊಡುವಂಥ ಜ್ಞಾನವ ಕರುಣಿಸಿ
ಪ್ರಾಣನಾಥ ಶ್ರೀ ಕರಿಗಿರೀಶನ ಪದ
ಧ್ಯಾನಿಪ ಸ್ಥಿರಮತಿ ತಾನಿತ್ತು ಪಾಲಿಪ ೩

(೨೯)

**ಗುರುವೇ ನೀ ಕರುಣಿಸದೆ ನಿರಾಕರಿಸಲು ಎನ್ನ**
**ಪೊರೆವರಿನ್ನಾರಿಳೆಯೊಳಗೆ** ಪ

ಪರಿಪರಿ ವಿಧದಲಿ ಕೊರಗುವೆ ಭವದಲಿ
ತರಳನ ಪೊರೆವುದೊ ಮರೆಯದೆ ಗುರುವೇ ಅ.ಪ

ದುರುಳ ದಾನವರು ಕಲಿಯ ಸಹಿತರಾಗಿ
ಧರೆಯೊಳಗವತರಿಸಿ ಸಚ್ಛಾಸ್ತ್ರಗಳನೆಲ್ಲಾ
ಪರಿಪರಿ ವಿಧದಲಿ ಹದಗೆಡಿಸುತ್ತಿರೆ ಶ್ರೀ-
ಹರಿಯಾಜ್ಞೆಯಿಂದವತರಿಸಿದೆ ಗುರುವೇ ೧

ಯತ್ಯಾಶ್ರಮವ ಸ್ವೀಕರಿಸುತ ಹರಿ ಸ-
ರ್ವೋತ್ತಮನೆಂದು ಸ್ಥಿರಪಡಿಸುತ ಜಗದಿ
ಮತ್ತರಾದ ದುರ್ವಾದಿಗಳನು ನಿಗ್ರಹಿಸುತ
ಹತ್ತಿದೆ ಮುತ್ತಿನ ಗದ್ದುಗೆಯನ್ನು ೨

ವಾದಿಗಜಸಿಂಹರ ಮೇದಿನಿಯೆಲ್ಲವ ಚರಿಸಿ ತವ
ಪಾದ ಭಜಕರಿಷ್ಟಾರ್ಥವ ಪೂರೈಸಿದ

ವಾದಿರಾಜ ಗುರುಸಾರ್ವಭೌಮರೆ ನಿಮ್ಮ ಅ-
ಗಾಧ ಮಹಿಮೆ ವರ್ಣಿಸೆ ಪನ್ನಗಗಸದಳ ೩

ವಧುವಿನ ವಿವಾಹಕಾರ್ಯವು ಅತಿ
ಮುದದೊಳು ನಡೆಯುತ್ತಿರಲು
ಮದುವಣಿಗನ ಬಾಸಿಗದೊಳಡಗಿದ
ಅದುಭುತ ಸರ್ಪವು ಕಡಿಯಲು ಆಗ ೪

ಮದುವೆಗೆ ಮಾಡಿದ ಸಾಧನಗಳು ಎಲ್ಲಾ
ವದಗಿತು ಉತ್ತರಕ್ರಿಯೆಗೆನ್ನುತ
ಬುಧ ಜನರೆಲ್ಲರು ಬಹು ಪರಿ ಚಿಂತಿಸಿ ಗುರು-
ವಾದಿರಾಜರೆ ಗತಿ ಎಮಗೆನ್ನುತ ೫

ಬುಧಜನರೆಲ್ಲಾ ಒಂದುಗೂಡಿ ಮುದ-
ದಿಂದ ತವ ಸನ್ನಿಧಿಗೇ ಬಂದು
ಅಂದು ನಡೆದ ಪರಿ ಎಲ್ಲವನರುಹಲು
ಬಂದೆಯೊ ಚಂದದಿ ಮದುವೆಯ ಮನೆಗೇ ೬

ಮಂಗಳಮಹಿಮ ಉತ್ತುಂಗ ತ್ರಿವಿಕ್ರಮನ-
ರ್ಧಾಂಗಿಯು ಹಿಂದೆಯೆ ಬೋಧಿಸಿದ
ಮಂಗಳಕರ ಲಕ್ಷ್ಮೀಶೋಭನ ಪದ್ಯವ
ರಂಗನ ಮಹಿಮೆಯ ಸಹಿತ ಪಾಡಲು ೭

ಅಸುವ ನೀಗಿದ ಮದುವಣಿಗನು
ಉಸುರನು ಬಿಡುತಲಿ ಸಂತಸದೊಳು
ಏಸು ಮಹಿಮರಿವರೆನ್ನುತಲಿ ಜನರೆಲ್ಲ
ಒಸೆದು ಭಜಿಸಿ ಕೊಂಡಾಡುತ ಬಹು ಪರಿ ೮

ಅಂದು ಅವರೆಲ್ಲರ ಮನಕಾನಂದಪಡಿಸಿ-
ದಂದದಿ ಎನ್ನ ಪೊರೆವುದೋ ಕರುಣಿಯೇ

ಮಂದರಧರ ಫಣಿಶಾಯಿವಿಠಲನ ಪದ-
ಕಂಜವ ಭಜಿಸುವ ಭಾವಿಮರುತರೇ ೯

(೩೦)

**ಚೌಪದನ ಚೌಪದನ ಜನರೆಲ್ಲ ಕೇಳಿ ಚೌಸಷ್ಟ**
**ವಿದ್ಯಕ ಇದು ಗರ್ಭಸ್ಥಾನ ತಿಳಿದಿರಲಿ** ಪ

ವಂದಿಸುವೆ ಇಂದಿರಾರಾಧ್ಯ ನಿನ್ನಡಿಗೆ
ಬಂದ ವಿಘ್ನವ ತರಿದು ವೇದಾರ್ಥ ನುಡಿಗಳಿಗೆ
ಛಂದಾಗಿ ಪೇಳುವ ಸುಜ್ಞಾನ ಕೊಡು ಯೆನಗೆ
ತಂದೆ ತಾಯಿ ಗುರು ಬಂಧೂ ನೀನೆ ನಿಶ್ಚಯ ತಿಳ್ಕೋ ಹಾಗೆ ೧

ಎನ್ನುವವ ಗುಣಕೆ ಮಿತಿಯಿಲ್ಲ ಎಣಿಸದಿರು ಸ್ವಾಮಿ
ಅನ್ಯಾಯ ಅಪರಾಧ ಅತಿಶಯ ಮಾಡಿದೆನೆ ಪ್ರೇಮಿ
ಎನ್ನ ಬಿಟ್ಟು ಕಡಿಗೆ ಕೇಳಿಬಂದೆ ನಿನ್ನ ಮಹಿಮಿ
ನಿನ್ನ ಪೊಗಳುವ ಬುದ್ಧಿ ಪ್ರೇರಿಸೊ ಬೃಂದಾವನಂತರ್ಯಾಮಿ ೨

ಮಂದಮತಿ ನಾನು ಛೆಂದಾಗಿ ಬೋಧಾಗೋ
ಹಾಗೆ ವೇದ ವೃಂದಾರ್ಥ ದೃಷ್ಟಿಯನೆ ಕರೆಯೋ
ಮುಂದಣ ವಾಯು ನೀನೆ
ಅಂಬೋ ಹಾಗೆ ಯತಿಶಿರೋಮಣಿ ಎನ್ನ ೩

ಎತ್ತಿ ಮುದ್ದಾಡಿ ಆಮ್ನಾರ್ಥ ಕೇಳೆಂದ
ಕರುಣ ದೃಷ್ಟಿಯಲಿ ನೋಡಿ ಸುತ್ತ
ಭೂವಲಯದೊಳಿಲ್ಲದೆ ಸ್ತೋತ್ರ ದಯ ಮಾಡಿ
ಇತ್ತ ಎನ ಕೈವಳಗೆ ಉತ್ತಮೋತ್ತಮ ವಂದ್ಯ ಭಯ ಕರ ನೀಡಿ ೪

ವಂದನೆಯ ಮಾಡಿದೆನಿವರ ಪದದ್ವಂದ್ವಗಳಿಗೆ ಎನ್ನ
ತಂದೆ ತಾಯಿ ವಾದಿರಾಜನೆಂಬುವೆನು ನುಡಿನುಡಿಗೆ
ಇಂದಿರೇಶನ ಮಹಿಮೆ ತಿಳಿಸೊ ನೀ ಯನಗೆ
ಬಂದ ಭಯಗಳ ಕಳೆದು ವಿಘ್ನ ಬಾರದ ಹಾಗೆ ೫

(೩೧)

**ದಯದಿ ಪಾಲಿಸೋ ವಾದಿರಾಜ ಗುರುವೇ ।**
**ನತಜನ ಸುರತರುವೇ** ಪ

ಹಯಮುಖ ಪದ ಸದ್ವನಜ ಸುಭೃಂಗಾ । ಪಾಲಿಸು
ದಯಾಪಾಂಗಾ ಅ.ಪ.

ರಜತ ಪೀಠದೊಳು ಕೃಷ್ಣ ಪೂಜೆಗಳನ್ನು । ಪರಿಪರಿ ರಚಿಸಿನ್ನೂ ।
ಕುಜನರ ಭೇದಿಪ ಭಜನೆ ಪದಗಳನ್ನೂ । ಸುಜನಕಿತ್ತೆ ನೀನೂ ॥
ಭಜಿಸೆ ಬಂದವರಿಗನ್ನೋದಕಗಳನೂ । ಏರ್ಪಡಿಸಿನ್ನೂ ।
ನಿಜ ಜನರ ಪೊರೆವ ಸುವ್ಯವಸ್ಥೆಗಳನ್ನೂ । ರಚಿಸಿ
ಮೆರೆದೆ ನೀನೂ ೧

ಅಂತರಂಗದಿ ಪೂಜಿಪೆ ಹಯವದನನ್ನ । ಭಾವಿ ಮರುತ ಎನ್ನ ।
ಅಂತರಂಗದೊಳು ನೆಲಿಸುತ ನೀಯೆನ್ನ । ಸಂಚಿತಾದಿಯನ್ನ ॥
ಅಂತಗಾಣಿಪ ಶ್ರೀ ಅಂತರಾತ್ಮನನ್ನ । ಚಿಂತೆ ಪಾಲಿಸು ಮುನ್ನ ।
ಯೆಂತು ವರ್ಣಿಸಲಿ ತವ ಮಹಿಮೆಗಳನ್ನ । ನಿಂತು ನಲಿ
ವದನದೊಳೆನ್ನ ೨

ಭರತ ಖಂಡದಿ ತೀರ್ಥ ಕ್ಷೇತ್ರ ಚರಿಸೀ । ತತ್ಪ್ರಂಬಂಧ ರಚಿಸೀ ।
ವಿರಚಿಸಿದೆಯೋ ರುಕ್ಮಿಣೀಶ ಕಾವ್ಯಾ । ಯುಕ್ತಿಮಲ್ಲಿಕೇಯಾ ॥
ಸುರಸ ಪದಗಳಲಿ ತತ್ವ ಪುಂಜವನ್ನ । ರಚಿಸಿ ಮೆರೆದೆ ರನ್ನ ।
ನಿರಣಯಾದಿಗಳ ಭಾವಗಳನ್ನ । ಕನ್ನಡದಿ ರಚಿಸಿದೆ ಘನ್ನ ೩

ಸ್ವಾದಿ ಪುರದಿ ಬಲು ಮುದದಲಿ ಮೆರೆದಾ । ಬಿರಿದು ಪೊತ್ತ ಶೈವಾ
ವಾದಿಸೆ ನಿನ್ನೊಳು ಸೋತು ನಿಂತನವ । ಪಾದದಿ ಬಿದ್ದು ಅವ ॥
ಮೇದಿನಿಯೊಳ್ ನಿಮಗೆ ಸಮರು ಆರು । ಎಂದೊಪ್ಪಿಸಿದನು ಅವ ।
ಮೋದದಿಂದಲಿ ಬಸವ ಚಿನ್ಹಿತವಾದ । ತವ ಚರಿತೆ ಆಗಾಧಾ ೪

ಪಂಚ ಸುವೃಂದಾವನಗಳ ರಚಿಸುತ್ತಾ । ತಾವ್ನಡುವಿರ ಬೇಕೆನುತಾ ।
ಅಂಚೆಗಮನ ಪ್ರಾಣ ಗಂಗಾಧರನಾ । **ಗುರುಗೋವಿಂದವಿಠಲನಾ** ॥

ಸಂಚಿಂತಿಸಿ ನಿಲಿಸುತ ನಾಲ್ಕರಲ್ಲೀ । ಚತುರ ದಿಕ್ಕಿನಲ್ಲೀ ।
ಪಂಚರೂಪಿ ನಿಷ್ಕಿಂಚಿನ ಪ್ರಿಯ ಹರಿಯಾ । ಪುರವ
ಸೇರಿದೆಯಾ ೫

(೩೨)

**ದಿಕ್ಕು ದೆಸೆ ನೀನೆ ಗುರು ವಾದಿರಾಜ**
ಇಕ್ಕೋ ಈ ದೇಹವನು ನಿನಗರ್ಪಿಸಿದೆನೋ ಪ

ಇನ್ನೊಬ್ಬರಿಗೆ ನಾನು ಶರಣೆನ್ನಲಾರೆನೋ
ನಿನ್ನಡಿಗೆ ಕೊರಳ ಕಟ್ಟಿದೆನೋ ಸತ್ಯ
ಅನ್ಯಾಯ ನ್ಯಾಯಗಳ ಬಲ್ಲ ಮಹಿಮನೊ ನೀನು
ನಿನ್ನ ನಂಬಿದ ಮೇಲೆ ಕೆಡಿಸುವವ ನೀನಲ್ಲ ೧

ಆರಾರಿಗಲ್ಪರಿದರಾರೇನ ಮಾಡುವರು
ಧೀರ ವಾಗೀಶ ಕರಕಮಲಜಾತ
ಧಾರುಣಿಯ ಮೇಲಿನ್ನು ನಿನ್ನಂಥ ಕರುಣಿಗಳ
ಆರಾರಿಸಿ ಹುಡುಕಿದರು ನಾ ಕಾಣೆ ಎನ್ನಾಣೆ ೨

ವೇದವೇದ್ಯಾಚಾರ್ಯ ವಂದಿತ ಪದಾಂಬುಜ
ಸಾಧುಕುಲತಿಲಕ ಸರ್ವಜ್ಞ ಮುನಿಯೇ
ಶ್ರೀಧವಲಗಂಗಾ ತಟನಿಲಯ ಸಲಹೆಮ್ಮ
**ಬಾದರಾಯಣವಿಠಲ** ಭಕ್ತಾಗ್ರಣಿಯೆ ಎಮಗೆ ೩

(೩೩)

**ವಾದಿರಾಜ ಗುರುರಾಜ ನಮೋ**
ಸ್ವಾದಿನಿಲಯ ಸುರಗುರುವೆ ನಮೋ
ಮೋದತೀರ್ಥ ಮತಚಂದ್ರ ನಮೋ
ಸಾಧುರಕ್ಷಕ ಮುನೀಂದ್ರ ನಮೋ ೧

ಜನನ ವಿಲಕ್ಷಣನೆನಿಸಿದೆಯೊ ಗುರು
ಘನ ಮಹಿಮಾಬ್ಧಿ ಸುನಾಮ ನಮೋ
ಮುನಿಕರುಣವೆನುವ ಗೌರಿ–ರಾಮಾಚಾರ್ಯರ
ಮನಕಾನಂದದ ಭಾವಿಸಮೀರ ನಮೋ ೨

ಮುನಿ ವಾಗೀಶರ ದಯದಿ ಕುಸುಮ ಕೆರೆ
ವರ ದಂಪತಿಗೇ ಕುಮಾರನೆನಿಸೀ
ಘನ ಕೇದಾರದಿ ಜನಿಸೆ ಸತಿಪತಿಗ–
ಳರಿತರ್ಪಿಸಿ ರಕ್ಷಿಸಿದ ಮಹಾತ್ಮ ೩

ಅರಿತು ವಾಗೀಶರು ಕನಕಭಾಜನದಿ
ತರಿಸಿ ತೊಳಿಸೆ ಕರ ಮುಗಿದ ಶಿಶೋ
ಸುರರು ಕುಸುಮ ಮಳೆಗರೆಯೆ ಶ್ರೀಹರಿಯ
ಸ್ಮರಿಸಿ ಭೂವರಹನೆನುತ ಕರೆದ ಗುರೋ ೪

ಉಪನಯನದಿ ಮಂತ್ರೋಪದೇಶ ಸಹ
ನಿಪುಣರ ಸಂಸ್ಥಾನದಿ ನಿಲಿಸಿ
ಸುಫಲರ ಶ್ರೀವಾದಿರಾಜರೆನೆ ಗುರು
ಕೃಪಾಪಾತ್ರಗೆ ನಮೋ ನಮೋ ೫

ವ್ಯಾಸರಾಯರಲಿ ವಿಜಯೀಂದ್ರರ ಸಹ
ವಾಸವಾಗಿದ್ದ ಕಾಲದಲಿ
ಭಾಸುರರನು ನೃಪ ಕೃಷ್ಣರಾಯ ಸಂ–
ತೋಷದಿ ಪ್ರಸಂಗಾಭರಣರೆಂದ ಗುರು ೬

ವಾಲಿಭಂಡಾರದ ರಾಮವಿಠಲ ಶ್ರೀ–
ಲೋಲನ ಪೂಜಿಸಿ ಬಹು ಧನವ
ಮೌಳಿನೃಪನಿಗಿತ್ತು ಹರ್ಷಗೊಳಿಸಿ ಆ
ಕಾಲದಲರಸನ ಸೇವೆ ಸ್ವೀಕರಿಸಿದ ೭

ಮಧ್ವಸರಸ್ಸಿಗೆ ಸೋಪಾನ ಕನಕ
ಶುದ್ಧಾಭರಣದ ಶ್ರೀಕೃಷ್ಣನಿಗೆ
ಶ್ರದ್ಧೆಯೊಳರ್ಪಿಸಿ ನೃಪನನು ಬಹು ಪರಿ
ಶುದ್ಧಾತ್ಮನ ಮಾಡಿದ ಗುರುವೆ ನಮೋ ೮

ವ್ಯಾಸರಾಯರಿಂ ವ್ಯಾಸಮುಷ್ಟಿಕೆಯ
ತಾ ಸ್ವೀಕರಿಸೀ ರಜತಪುರದಲೀ
ಮೀಸಲ ಮನದಲಿ ಪೂಜಾಪದ್ಧತಿ
ತಾ ಸಲಿಸಿದ ಹರಿಸನ್ನಿಧಿಯುತ ಗುರು ೯

ದಶಪ್ರಮತಿಗಳಿಗೊಲಿದು ಪ್ರತಿಷ್ಠಿತ
ಶಿಶು ಶ್ರೀಕೃಷ್ಣ ದುರ್ಗಾ ಬಲರಾ –
ಮ ಸುಧಾಸುರರಿಂ ಪೂಜಾಕ್ರಮ ಸಂ–
ತಸದಿ ಪದ್ಧತಿಯ ಗೈಸಿದ ಮುನಿವರ ೧೦

ವರ ದ್ವಾದಶಸ್ತೋತ್ರದಿ ಬಹು ವಿಷ
ಪರಿಹರವಹುದು ನಿಜವೆನುತರುಹಿ
ಸರಸದಿ ಸ್ತುತಿಸಿ ಶ್ರೀಕೃಷ್ಣನ ಪೂಜಿಸಿ
ನಿರವಧಿ ಮಹಿಮನೆಂದರುಹಿದ ಗುರೋ ೧೧

ಸೋನಗಾರನೋರ್ವ ಲೋಹವ ಕರಗಿಸಿ
ಗಣಪತಿ ವಿಗ್ರಹವನು ತೆಗೆಯೆ ಅದು
ಗುಣನಿಧಿ ಹಯಮುಖನಾಗುತಲವನಿಗೆ
ಕನಸಿನೊಳೊರೆದರ್ಪಿಸಲು ಪೂಜಿಸಿದೆ ೧೨

ಮಾಸದ್ವಯ ಪೂಜೆಯನೆರಡಬ್ದಕೆ
ತಾ ಸಮನಿಸಿ ಯತಿವರರಿಂ ನಡೆಸುತ
ಸಾಸಿರನಾಮನ ಒಲುಮೆಗೆ ಸಮಯವ
ಲೇಸು ಮಾಡಿ ನಿಲಿಸಿದ ಗುರುವರ ನಮೋ ೧೩

ಕೋಟ ಕೋಟೇಶ್ವರರ ಪರಸ್ಪರ ವಿರಸವ
ಕೂಟದಿ ಸೇರಿಸಿ ಮುದಗೊಳಿಸಿ
ನೋಟದೊಳಸ್ಪೃಶ್ಯರ ಹರಿಭಜನೆಯ
ಕೂಟದೊಳು ನಿಲಿಸಿ ಸಲಹಿದ ಯತಿವರ ೧೪

ಪುಣ್ಯಪುರದಿ ವಿದ್ವನ್ಮಣಿಗಳು ಬಹು
ಮಾನ್ಯ ರುಕ್ಮಣೀಶವಿಜಯವನು
ಘನ್ನವೆನ್ನುತಲಾನೆಯ ಮೇಲ್ಮೆರಸುತ
ಧನ್ಯರೆನಿಸೆ ಸನ್ಮಾನ್ಯರಾದ ಗುರೋ ೧೫

ಅಶ್ವಾರೋಹಿಯ ರಕ್ಷಣೆಯಿಂದಿಹ
ದೃಶ್ಯವ ಕಂಡಚ್ಚರಿಯಲಿ ನಮಿಸಲು
ವಿಶ್ವವಂದ್ಯ ಸಲಹಿದ ಮ್ಲೇಚ್ಛರನು
ಅಶ್ವವದನನ ಕೃಪಾಪಾತ್ರರಾದ ಗುರು ೧೬

ಕಡಲೆ ಹೂರಣವ ಶಿರದಿ ಧರಿಸೆ ಹರಿ
ಸಡಗರದಿಂ ಪದವೆರಡು ಹೆಗಲ ಮೇಲೆ
ಇಡುತ ಮೆದ್ದಿಳಿಸೆ ಭುಂಜಿಸಿ ಸಂತಸ
ಪಡುತ ನಲಿಯುತಲಿ ಧ್ಯಾನಿಪ ಯತಿವರ ೧೭

ಪುರ ಪಂಢರಿಯಲಿ ಧನಿಕನ ಕ್ಷೇತ್ರದಿ
ಪರಮ ಹಯಾಸ್ಯನು ಮೆದ್ದುದರುಹೆ ಹರಿ
ಮರುದಿನ ಗಿಡದಿ ಕನಕ ಕಡಲೆ ಕಾಣಿಸೆ
ಹರಿಗರ್ಪಿಸೆ ಧನ್ಯನ ಮಾಡಿದ ಗುರು ೧೮

ಬಾದರಾಯಣರು ಬರುತ ಪ್ರಯಾಗದಿ
ವಾದಿರಾಜ ನಿಮ್ಮ ಬದರಿಗುಯ್ಯೆ ಸನ್ನ-
ಕಾದಿ ಮಧ್ವರನು ಕಂಡು ಕರ ಮುಗಿದು
ವೇದಾರ್ಥಗಳ ವಿಚಾರದಿ ಗ್ರಹಿಸಿದ ಗುರು ೧೯

ದ್ವಾರಕ ಕಾಶಿ ಕ್ಷೇತ್ರ ವಿಪ್ರರಿಗೆ
ತಾರಕ ಮಧ್ವಾಷ್ಟಕ ಪಠನದಿ ಜ್ವರ-
ವಾರಿಸಿ ತತ್ವಪ್ರಚಾರದಿ ಹರಿಯು ಅ-
ಪಾರ ಮಹಿಮನೆಂದರುಹಿದ ಕರುಣಿ ೨೦

ಗರುಡ ಮಾರುತಿ-ಪ್ರತಿಮೆ ಅಯೋಧ್ಯಾ
ಪುರದೊಳಿದ್ದುದನು ಕೃಷ್ಣಮಂದಿರದಿ
ಇರಿಸಿ ಪ್ರತಿಷ್ಠಿಸಿ ಸುರರು ಪೊಗಳುತಿರೆ
ಹರುಷದಿ ಪೂಜೆಯ ಕ್ರಮದಿ ನಡೆಸುತಿಹ ೨೧

ತನ್ನಯ ಶಿಷ್ಯನ ಉನ್ಮತ್ತತೆಗವ-
ನನ್ನು ಬ್ರಹ್ಮರಕ್ಕಸನೆನ್ನಿಸೆ
ಬೆನ್ನ ಬೀಳೆ ಭೂತನ್ನ ಮಾಡಿಕೊಂ-
ಡುನ್ನತ ಮಹಿಮೆಯೊಳ್ಮೆರೆದೆ ಮಹಾತ್ಮ ೨೨

ಋಣಿಯಾಗಿದ್ದುದ ಸ್ಮರಿಸಿ ಸಕಾಲದಿ
ಧನವ ಗಳಿಸಿ ಹರಿಭಕುತರಿಂದ
ತನುಮನ ಸೇವೆಯ ಸಲಿಸಿ ಗುರುವರಗೆ
ವಿನಯಮೂರ್ತಿ ಎನಿಸೆ ನಿಲಿಸಿ ಮೆರೆಸಿದೆ ೨೩

ಉರಗನ ಭಯಕಂಜುತ ಮೂಷಕ ಬರೆ
ಅರಿತಭಯನಿತ್ತುರಗನ ಕ್ಷುಧೆಯನು
ಹರಿಸಿ ಕರ ಫಣದೊಳಿರಿಸೆ ಹರುಷದಿಂದ
ತೆರಳುವಂತೆ ಮಾಡಿದ ಗುರುವೆ ನಮೋ ೨೪

ಭೂತಕ್ಷೇತ್ರ ತನ್ನಾಥನದೆನಿಸುತ
ಜಾತಿನೀತಿಯರಿತನ್ನದಾನದಲಿ
ಖ್ಯಾತಿಮಹಂತರ ವಚನವೆ ಸತ್ಯವು
ಈ ತೆರ ಸಂತತವಿರುವಂತೆಸಗಿದೆ ೨೫

ಕುಮಾರಧಾರಾ ನೇತ್ರಾವತಿ ಸಂ-
ಗಮದೀ ದಂಡತೀರ್ಥವ ರಚಿಸೀ
ಉಮಾಪತಿಗೆ ಅಭಿಷೇಕವ ಗೈಸಿದ
ಸಮೀರಪದ ಭಕುತರ ಪಾಲಿಸುವೆ ೨೬

ಸ್ವಚ್ಛ ಮಹಿಮರಿಗೆ ಪಚ್ಚೆವಿಟ್ಠಲನ
ಸ್ವೇಚ್ಛೆಯೊಳರ್ಪಿಸಿ ಪೂಜಿಸುತ
ಮತ್ಸರವಿರಹಿತ ಜೈನ ನೃಪತಿಯನು
ಮೆಚ್ಚಿ ಭಕುತನೆನಿಸಿದೆ ಗುರುಮುನಿಯೆ ೨೭

ಋಣದಾರಿದ್ರ್ಯವು ಕುಷ್ಟರೋಗಗಳು
ಘನ ಮೃತ್ತಿಕೆಯಿಂದ ಪರಿಹರವು
ಜನರನುಭವ ಕಾರಣ ಗುರುಭಕ್ತಿಯು
ಘನ ಮಂತ್ರಪಠಣ ಲೇಸೆನುತರುಹಿದೆ ೨೮

ಅನುಜನು ಪಿತೃಸೇವರತನಾಗಿ-
ದ್ದವ ದಯದಲಿ ಸನ್ಯಾಸವ ಬಯಸಲು
ಘನತರ ಭಂಡಾರಕೇರಿಮಠಕಧಿಪರು
ಮುನಿಯು ಸುರೋತ್ತಮತೀರ್ಥರೆನಿಸಿದ ೨೯

ಹರಕೆ ಮಾತೆಯದು ಸಲಿಸೆ ಭಾರತಕೆ
ಬರೆದ ವ್ಯಾಖ್ಯಾನ ಲಕ್ಷಾಭರಣ
ಮುರಮಥನಿಗರ್ಪಿಸಿ ಸಂತೈಸಿದ
ಅರವಿದೂರರನು ಪೊಗಳಲಳವೆ ಗುರೋ ೩೦

ದುರುಳರು ಪಾಚಕರಿಗೆ ಬೋಧಿಸುತಲಿ
ಗರಳ ಬೆರಸಿದ್ಧೂರಣವರ್ಪಿಸಲು
ಹರಿಯು ಭುಂಜಿಸಿ ಗರಳಗೊರಳನಾ
ಗಿರುತಿಹನೀಗಲು ಸಾಕ್ಷಿಯಹುದಿದಕೆ ೩೧

ಮತಿಭ್ರಷ್ಟರಹಿತರಾಗೆ ಸ್ವಕ್ಷೇತ್ರದಿ
ಪತಿತ ವಿಪ್ರರಿಂ ಬೆಳೆಸಿದ ಗುಳ್ಳವ–
ನತಿಭಕ್ತಿಯೊಳರ್ಪಿಸೆ ಸ್ವೀಕೃತವಹು–
ದತುಳ ಗರಳಹರವೆನಿಸಿದ ಗುರುವರ ೩೨

ವೇಲಾಪುರದಲಿ ಚನ್ನಕೇಶವನು
ಮೇಲು ರಥದಿ ಬರೆ ಕಾಣುತ ಶ್ರೀ–
ಲೋಲನ ಸ್ತುತಿಸೆ ವೈಕುಂಠದಾಸರಾ–
ವೇಳೆ ನಮಿಸೆ ಬಹು ಮಹಿಮೆಯ ತೋರಿದೆ ೩೩

ಹಯದರ್ಶನವಿತ್ತಾಕೃಷಿಕನಿಗೆ ಸು–
ನಯನದಿ ಕನಕನ ಮನವನು ಒಂದೆನಿಸೆ
ದಯಗೊಳಿಸಿ ಹರಿಯ ಪರಿಪರಿ ಭಜಿಸುತ
ಹಯವದನನಿಗೆ ಮಂಗಳ ಪಾಡಿದ ಗುರು ೩೪

ತತ್ವವಿಚಾರದಿ ಕೊಲ್ಹಾಪುರದಿ
ಕ್ಷೇತ್ರ ಚರಿಸಿ ತಿರುಪತಿ ಶ್ರೀಲೋಲನ
ಗಾತ್ರ ಮರೆತು ಸ್ತುತಿಸಿದ ಸೇವಕನೆಂದುತ್ತಮ
ಪುರುಷೋತ್ತಮನ ದಾಸವರ ೩೫

ಆಪಾದಶಿರ ಸಾಲಿಗ್ರಾಮದ ಸರ
ಶ್ರೀಪತಿಗರ್ಪಿಸಿ ಸೇವಿಸುತ
ಆ ಪರಮನ ಕೃಪಾಪಾತ್ರರಾಗಿ ಮತ್ತಾ
ಪರಮೇಷ್ಠಿಯ ದತರ್ಹ ಗುರುವರ ೩೬

ಸಿರಿಕೃಷ್ಣನ ಪರ್ಯಾಯ ನಾಲ್ಕರಲಿ
ಪರಿಪರಿ ಪೂಜಿಸಿ ವಿಭವದಲಿ
ಚರಿಸಿ ಭೂವಲಯ ಕ್ಷೇತ್ರಗಳಲ್ಲಿ ಮಠ–
ವಿರಿಸಿ ಪದ್ಮನಾಭನನರ್ಚಿಸಿದ ಮುನಿ ೩೭

ಇಂದಿರೇಶನತಿ ಸುಂದರಾಶ್ವಮುಖ
ನೆಂದಿಗು ಹೃನ್ಮಂದಿರದಿ ಧ್ಯಾನಿಪಾ-
ನಂದ ಶರಧಿಯೊಳಗೀಸುತಿರುವ ಬಹು
ಸುಂದಢ ಯತಿವರ ಭಜಕರ ಪೊರೆಯುವ ೩೮

ಪಾಜಕ ಕ್ಷೇತ್ರದಿ ಮಧ್ವರ ಪ್ರತಿಮೆಯ
ಪೂಜಿಸೆ ಮಂದಿರ ರಚಿಸಿ ಪ್ರತಿಷ್ಠಿಸಿ
ಮೂಜಗದೊಳಗಚ್ಚರಿಯ ಸದ್ಗ್ರಂಥ ನಿರ್-
ವ್ಯಾಜ ಭಕುತಿಯಲಿ ರಚಿಸಿ ಮೆರೆದ ಗುರು ೩೯

ಅರಸಪ್ಪನ ಅಳಿಯನ ಮೃತಿಯ ತಪ್ಪಿಸಿ
ಉಳಿಸಲು ಸ್ವಾದಿಯ ದಾನವಿತ್ತು ಬಹು
ಸರಳವಾಗಿ ಭವ್ಯ ಸೇವೆ ಸಲ್ಲಿಸಲು
ಹರಿಯ ನಿಲಿಸಿ ಕ್ಷೇತ್ರವೆನಿಸಿ ರಾಜಿಪ ೪೦

ಅಂಧತೆಯಲಿ ಶ್ರೀಕೃಷ್ಣ ದರ್ಶನ-
ಕೆಂದು ಬಂದೊಡನೆ ಕಂಡು ಮನದಣಿಯೆ
ವಂದಿಸಿ ಸ್ತುತಿಸುತ ಸ್ವಾದಿಗೆ ಮರಳುತಾ-
ನಂದತೀರ್ಥರನು ಸ್ಮರಿಸಿದ ಗುರುವರ ೪೧

ವೇದವೇದ್ಯರನು ಪೀಠದಿ ನಿಲಿಸುತ
ಮೋದದಿ ಕೃಷ್ಣನ ಸೇವೆ ಸಲಿಸುತ
ಮೇದಿನಿ ಸುರರನು ಮುದಗೊಳಿಸಿ ಹರಿ
ಬಾದರಾಯಣರ ಸ್ಮರಿಸಿ ನಮಿಸಿದೆ ೪೨

ಬದರಿಕಾಶ್ರಮಕೆ ಕಳಿಸಿ ಭೂತರಾಜನ
ಮುದದಿ ತ್ರಿವಿಕ್ರಮ ಮೂರ್ತಿಯ ತರಿಸಿ
ಸದನದ ಸೇವೆಗೆ ನೃಪನು ವಿರಚಿಸಿರೆ
ಅಮೃತೋತ್ಸವ ನಡೆಸಿ ಹರುಷಿಸಿದೆ ೪೩

ಉತ್ತರ ಭಾಗದಿ ದಿವ್ಯ ಸರಃಸ್ಥಿತ
ಕರ್ತೃಭೂತ ನಾರಾಯಣ ಭಕ್ತನ
ನಿತ್ಯ ಸೇವೆ ಧನಗಳಿಸೆ ಹರಿಕೃಪಾ
ಪಾತ್ರನ ಮಾಡಿಸಿ ಪೊರೆಯುತಲಿರುವ ೪೪

ಕಲಿಪರಮಾವಧಿ ವಿಂಶಮಸಮ ಸಮ
ಸಲಿಸಿ ಸೇವೆ ಹರಿಗುರು ಜನ ಸುಜನರ
ಕಲುಷದೂರನೆನಿಸಿ ಹರುಷಗೊಳಿಸೀ
ವಿಲಸಿತ ಭೂವಲಯದಿ ಮೆರೆಯುತಲಿರುವ ೪೫

ಬೃಂದಾವನ ಪಂಚಕವು ತ್ರಿಮೂರ್ತಿಗಳಿಂದ
ವಾಯು ಮತ್ಸ್ಯಾದಿಗಳಿಂದ ಶೋ-
ಭಿಸೆ ಸುರೇಂದ್ರದೂತರಿಗೆ ಒಂದೆರಡು
ದಿನದಿ ಬರುವೆವೆನುತ ಅರುಹಿದೆ ೪೬

ಬೃಂದಾವನ ಯಾತ್ರೆಯೆ ಮಹಾಯಾತ್ರೆಯು
ಎಂದು ತಿಳಿದು ಸುಜನರು ಸತತ
ಬಂದು ನಿಂದು ಉತ್ಸವದಿ ಪ್ರಸಾದವ
ಪೊಂದೆ ಜನುಮ ಸಫಲವೆಂದು ಅರುಹಿದೆ ೪೭

---

**ಟಿಪ್ಪಣಿ**

ನುಡಿ ೧೧: ದ್ವಾದಶಸ್ತೋತ್ರಪಠನದಿಂದ ವಿಷಪರಿಹಾರವಾಗುವ ಮಾತಿದೆ. ಅದಾವ ಸಂದರ್ಭವಿದು?

ನುಡಿ ೩೪, ೩೫ : ಇವುಗಳ ಭಾವ ಸ್ಪಷ್ಟವಾಗಿ ತಿಳಿಯದು.

ನುಡಿ ೪೧: ಶ್ರೀ ವಾದಿರಾಜರು ಕೃಷ್ಣದರ್ಶನ ಪಡೆಯಲೆಂದು ಉಡುಪಿಗೆ ಬಂದಾಗ, ಅಂಧತ್ವದಲ್ಲಿ ಅದು ಕೈಗೂಡಲಿಲ್ಲೆಂದು ಪರಿತಪಿಸಿದ ಸಂದರ್ಭ ಇಲ್ಲಿದೆ. ಅದರ ಮೂಲ ಈ ಶ್ಲೋಕದಲ್ಲಿದೆ:

ಯದಿ ದಿಶಸಿನಯನ ಪಟು ತಾಂ
ತರ್ಹಿ ಭವಚ್ಚರಣಕಮಲ ಸೇವಾಯ್ಯೈ
ಆಯಾಸ್ಯಾಮಿ ದಯಾಳೊ ಕೃಷ್ಣ
ನ ಚೇತ್ ಪೂಜಯಾಮಿ ಕಥಮ್ ಅಂಧಃ

ಈ ಕೀರ್ತನೆಯನ್ನು ರಚಿಸಿದವರಾರೆಂದು ತಿಳಿಯಲು ಅಂಕಿತವಿಲ್ಲ. ಆದರೆ ಶ್ರೀ ವಾದಿರಾಜರ ಚರಿತ್ರೆಯ ಸಾಕಷ್ಟು ಪೂರ್ಣವಾಗಿ ಬಂದಿದೆ.

(೩೪)

ನಮೋ ನಮೋ ಶ್ರೀವಾದಿರಾಜ ।
ನಮೋ ನಮೋ ಶ್ರೀ ಸ್ವಾದಿರಾಜ
ನಮೋ ನಮೋ ರವಿಕೋಟಿತೇಜ ।
ನಮೋ ನಮೋ ಗುರು ರಾಜಾಧಿರಾಜ ಪ

ಭೂವರಾಹನು ಕನಸಲಿ ಕರುಣಿಸೆ ।
ಗುರು ವಾಗೀಶರು ಗೌರಿಯ ಹರಸೆ
ಹೂವಿನಕೆರೆಯೊಳು ನೀ ಜನಿಸಿ ।
ಭಾವಿಸಮೀರ ಯತಿ ಎನಿಸೆ ೧

ಗುರು ವಾಗೀಶರ ಆಣತಿ ಪಡೆದು ।
ಸಿರಿ ವಿಜಯನಗರಕೆ ಬಂದು ದುರ್ವಾದಿಯ ಗೆಲ್ದು ೨

ವೇದವ್ಯಾಸರ ತಪದೊಳು ಮೆಚ್ಚಿಸಿ ।
ಬದರಿಗೈದಿದ ಯತಿಶೂರ
ಬಾದರಾಯಣಾನಂದತೀರ್ಥರ ।
ಅನುಗ್ರಹಪಡೆದ ಯೋಗಿವರ ೩

ವಾದದಿ ದುರ್ವಾದಿಯ ಸೋಲಿಸಿ ।
ಕೀರ್ತಿಪತಾಕೆಯ ಸ್ಥಾಪಿಸಿದೆ
ಮೇದಿನಿಯೊಳು ಹರಿ ಸರ್ವೋತ್ತಮನೆಂದು ।
ಸಾಧಿಸಿ ಜನಕುಪದೇಶಿಸಿದೆ ೪

ನೆಲಸುತ ಸ್ವಾದೀಕ್ಷೇತ್ರದಿ ಗುರುವೇ
ಒಲಿಯುತ ಭಕ್ತಗಭೀಷ್ಟವ ಕೊಡುವೆ ।
ಕಲುಷಿತ ಹೃದಯದ ಪರಿವರ್ತಿಸುವೆ
ಒಲುಮೆಯ ಕರುಣಾಗುಣಸರವೇ । ೫

ನೂರು ವರುಷಕು ಮೀರಿ ಪ್ರವಾಸ
ಮೂರು ಬಾರಿ ಸುತ್ತುತ ದೇಶ ।
ಭಾರತ ದೇಶಕೆ ನೀಡ್ಯುಪದೇಶ
ಸಾರಿದೆ ಹರಿ ಸರ್ವೋತ್ತಮ ಈಶ । ೭

ವಿಷ್ಣುತತ್ವ ಪ್ರಕಾಶಕ ವಾದಿರಾಜ
ಕೃಷ್ಣಪೂಜಕ ವಾದಿರಾಜ ।
ವಿಷ್ಣುತೀರ್ಥಾರ್ಚಕ ವಾದಿರಾಜ
ಇಷ್ಟರ ಸಲಹುವ ಶ್ರೀ ವಾದಿರಾಜ । ೭

ನಾರಳಗ್ರಾಮದ ನಾರಾಯಣ ಶಿಷ್ಯನು
ಪರವಿದ್ಯಾ ಮದದಲಿ ಮೆರೆಯೆ ।
ಮೀರಿ ಗುರುಗಳ ಗರ್ವದಿ ಜರಿಯೆ
ಕಾರುಣ್ಯದಿ ನೀನವರನುದ್ಧರಿಸೆ । ೮

ರೋಷದಿ ನಾಗ ಇಲಿಯಟ್ಟಿ ಬರೆ
ಮೂಷಿಕ ಭಯದಿ ನಿಮ್ಮಾಶ್ರಯ ಪಡೆಯೆ ।
ದೋಷ ಹರಿಸುತ ಸರ್ಪನ ದಂಡಕೆ ಕಳುಹಿ
ಪೋಷಿಸಿ ಇಲಿಗೆ ಅಭಯವನಿತ್ತೆ । ೯

ದ್ವಾಪರದೊಳು ಹರಿಗೋಪತಿಯಾದ
ದ್ವಾರಕ ಭೂಪತಿ ಕೃಷ್ಣನ ಪೂಜಿಪೆ ।
ತಾಪಸಿ ಗುರ್ವಾದಿ ರಾಜ ಪೊರೆ
ಗೋಪಿನಾಥ ಕೃಷ್ಣನ ಭಕ್ತ । ೧೦

ಶ್ರದ್ಧೆಯಿಲ್ಲವೀ ಚಂಚಲ ಮನಸು
ಛಿದ್ರವಾಯಿತು ಭವ ಕನಸು ।
ಶುದ್ಧ ಮನಸನು ನಿನ್ನಲಿ ನಿಲಿಸು
ಮುಗ್ಧನಹೆನೆನ್ನುದ್ಧರಿಸು । ೧೧

ಹಯಮುಖ ಭಜಕರ ಭಕ್ತಸಖ
ಭಯನಿವಾರಕ ವಾದಿರಾಜ ।
ಜಯಪ್ರದಾಯಕ ಭಕ್ತಪೋಷಕ
ದಯವನು ಕರುಣಿಸೊ ಶ್ರೀ ಗುರುರಾಜ । ೧೨

ಪಂಚಶರಪಿತ ಹಯಮುಖಿಗೆ
ಪಂಚಪಾಂಡವ ರಕ್ಷಕಗೆ ।
ಪಂಚ ಪರ್ಯಾಯದಿ ಪೂಜೆಯ ಸಲಿಸಿ
ಪಂಚ ಬೃಂದಾವನದೊಳು ನೀ ಮೆರೆದೆ । ೧೩

ಕುಷ್ಠರೋಗಿಯು ನಿಮ್ಮಲಿ ಮೊರೆಯಿಡೆ
ಮುಷ್ಟಿ ಮೃತ್ತಿಕೆ ಕರುಣದಿ ನೀಡೆ ।
ಇಷ್ಟದೇವ ಶ್ರೀಕೃಷ್ಣನ ಸ್ಮರಿಸುತ
ಕುಷ್ಠರೋಗ ನಿವಾರಿಸಿದೆ । ೧೪

ತೀರ್ಥಪ್ರಬಂಧ ಯುಕ್ತಿಮಲ್ಲಿಕಾ
ವರಲಕ್ಷಾಲಂಕಾರ ಪಾರ್ಥಸಾರಥಿ ದಯದಲಿ ರಚಿಸಿ
ಕೀರ್ತಿಪಡೆದ ದಯಾಕರ ೧೫

ದಕ್ಷ ಶಿಲ್ಪನಹ ಸೊನೆಗಾರ
ಲಕ್ಷಣ ಗಣಪತಿ ವಿಗ್ರಹ ಕಡೆಯೆ ।
ತಕ್ಷಣ ಗಜಮುಖ ಹಯಮುಖನಾಗೆ
ಅಕ್ಷಯ ಕೃಪೆಯಲವನುದ್ಧರಿಸೆ । ೧೬

ಮುತ್ತಿಗೆ ಹಾಕಲು ವೈರಿಗೆ ಹೆದರಿ
ಗೊತ್ತುಗೆಟ್ಟು ಸುರಂಗಮಾರ್ಗದಿ ।
ಪತ್ತನದರಸನು ಮೊರೆಹೋಗಲು
ಚಿತ್ತದಿ ಕಾರುಣ್ಯವ ನೀ ತಾಳ್ದೆ । ೧೭

ಚಿತ್ತಜತಾತ ಹಯಮುಖ ಮಂತ್ರ
ಇತ್ತುಪದೇಶಿಸಿ ಅರಸನ ಪೊರೆದೆ ।

ಉತ್ತಮ ಸ್ವಾದೀರಾಜ್ಯದ ಭಕ್ತ
ಇತ್ತನು ಬಳುವಳಿ ನಿಮ್ಮಡಿಗೆ । ೧೮

ಮತ್ತ ವಾದಿಯ ವಾದದಿ ಸೋಲಿಸಿ
ತೊತ್ತಿನ ಪದಹತಿ ಶಿಕ್ಷೆಯ ವಿಧಿಸೆ ।
ಮುತ್ತು ಕುಲಾವಿ ಗದ್ದುಗೆ ಸಕಲ
ವಿತ್ತವನಿತ್ತು ಸೋಲೊಪ್ಪಿದನು । ೧೯

ಭೂತರಾಜರ ಬದರಿಗೆ ಕಳುಹಿಸಿ
ಖ್ಯಾತ ತ್ರಿವಿಕ್ರಮ ಮೂರ್ತಿಯ ತರಿಸಿ ।
ರೀತಿಯಿಂದಲಿ ಮೂರ್ತಿ ಪ್ರತಿಷ್ಠಿಸಿ
ದ್ವಿತೀಯ ಬದರಿಯ ಸೃಷ್ಟಿಸಿದೆ । ೨೦

ಮಂಗಳವಾಗಲಿ ನರಹರಿಗೆ ಮಂಗಳವಾಗಲಿ
ಇಂದಿರೆಗೆ ಅಂಗಜಪಿತಸುತ ಚತುರಾನನಗೆ
ಮಂಗಳವಾಗಲಿ ಸರಸತಿಗೆ ೨೧

ಮಂಗಳವಾಗಲಿ ಹನುಮನಿಗೆ
ಮಂಗಳವಾಗಲಿ ಭೀಮನಿಗೆ
ಗಂಗೆಯ ಶಿರದಲಿ ಧರಿಸಿದ ಹರಗೆ
ಮಂಗಳಗೌರಿ ಪಾರ್ವತಿಗೆ ೨೨

(೩೫)

**ನಿಜ ಕೈರವದ್ವಿಜರಾಜ ಜಯ** ಪ

ನಿಜ ಕೈರವದ್ವಿಜರಾಜ ನೈಜಸುಖ
ವ್ರಜದಾಯಕ ವಾದಿರಾಜ ಅ.ಪ.

ಯಾತ್ರಾಚರಣ ಕ್ಷೇತ್ರತೀರ್ಥ ಪದ
ಸ್ತೋತ್ರರಚನ ವಿಚಿತ್ರ ೧

ಶ್ರೀಕರ ಭಾರತ ಟೀಕಾಕಾರಣ
ಲೋಕಮಹಿತ ಸುಶ್ಲೋಕ ೨

ರುಗ್ಮಿಣೀಶ ವಿಜಯೋರುರತ್ನಮಯ
ಸ್ರಗ್ಭೂಷಾ ಪ್ರತಿವಾಗ್ಮೀ ೩

ಭಕ್ತ್ಯಾದರ ಸದ್ಯುಕ್ತಿಮಲ್ಲಿಕಾ
ವ್ಯಕ್ತಿ ಕಾರಣ ಸುಶಕ್ತಾ ೪

ತಾನಾಗಾನ ಸುಶಾಣನಿರಂಜನ
ಸಾನುರಾಗ ಹರಿಧ್ಯಾನ ೫

ಕಂಟಕಹರ ವೈಕುಂಠವರ್ಣನೋ-
ತ್ಕಂಠಿತ ವರಮಯಕಂಠಾ ೬

ಚಂಡಮಾಯಿ ಮುಖ ಷಂಡೋದ್ದಮನೆ
ಗುಂಡಕ್ರಿಯ ಕೋದಂಡಾ ೭

ಹಯವದನಾಂಕ ಶ್ರಯಪದ ಸುಳಾದಿ
ಜಯಕೃತ ಸದಯೋಪಾಯ ೮

ಕಮಲೇಶಿಷ್ಟದ ಭ್ರಮರಗೀತ ಪದ
ಸಮುದಾಯ ಪ್ರಕಟನ ಕಾಮಾ ೯

(೩೬)

ನೀನೇ ಘನ್ನ ಪಾವನ್ನ ಗುರುವರ ಪ

ನೀನೇ ಘನ್ನ ಪಾವನ್ನ ಗುರುವರ
ನಾನು ಬೇಡಿದೆ ಸಾನುರಾಗದಿ
ದಾನಿ ಅದಕನುಮಾನ ಮಾಡದೆ
ನಾನಾಭೀಷ್ಟೆಯ ನೀನು ಕೊಡೋದಕೆ ಅ.ಪ.

ನಿನ್ನ ನಂಬಿದೆ ನಾನು ಯತಿಕುಲಾಗ್ರಣಿ
ರನ್ನ ಪಾಲಿಸೊ ನೀನು
ಎನ್ನ ನುಡಿಗಳ ಮನ್ನಿಸೀ ಪೊರಿ
ಅನ್ಯನಲ್ಲವೊ ನಿನ್ನ ತನುಜನು
ಧನ್ಯನಾಗುವದನ್ನು ಸಲಿಸೋ
ಘನ್ನ ಮಹಿಮಾಪನ್ನ ಪಾಲಕ ೧

ಆರ್ತಜನಮಂದಾರಾ ಮೋಕ್ಷಾದಿ ಸತ್ಪುರು –
ಷಾರ್ಥ ಮಹದಾತಾರ
ತೀರ್ಥಪದಯುಗ ಪಾರ್ಥಸೂತಗೆ
ವಾರ್ತೆ ತಿಳಿಸಿ ಆರ್ತ ಸತಿಯಾ
ಅರ್ತಿ ಕಳೆದಿಹ ಕೀರ್ತಿ ಕೇಳಿ
ಪ್ರಾರ್ಥಿಪೆನೊ ಕೃತಾರ್ಥನೆನಿಸೋ ೨

ಮಾತಾ ಪಿತ ಗುರುದೂತಾ ಎನಗೆ ಭಾವಿ ವಿ-
ಧಾತಾ ಭ್ರಾತ ಸುಪೋತ
ಭೂತಪತಿ ಸುರಯೂಥ ವಂದ್ಯನೆ
ದಾತ **ಗುರುಜಗನ್ನಾಥವಿಠಲನ**
ದೂತ ಮನ್ಮನೋಜಾತ ಕಾಮಿತ
ದಾತಭೀಷ್ಟೆಯ ವ್ರಾತ ಸಲಿಸೋ ೩

(೩೭)

**ನೋಡಿ ದಣಿಯವೆನ್ನ ಕಂಗಳು ಈ ಸೋದೆಲಿರುವ**
ಈಡು ಇಲ್ಲದುತ್ಸವಂಗಳ
ಬೇಡಿದವಗೀ ಧ್ವಜವೆತ್ತಿ ನೀಡಿ ದಯ ಸೂರ್‍ಯಾಡುವರ ಪ

ಯತಿಗಳ ಸಮೂಹವೆಷ್ಟು ಮಿತಿಯಿಲ್ಲದ ಬ್ರಾಹ್ಮಣ್ಯವೆಷ್ಟು
ಮತಿಹೀನರಿಗೆ ಗತಿಯ ಕೊಡುವ ಪೃಥಿವಿಗಧಿಕ ಗುರುಗಳನ್ನು ೧

ಭೂತನಾಥಗೆರಗಿ ನಿಂತು ವಾತಸುತಗೆ ಕೈಯ ಮುಗಿದು
ಆತ ನಾರಾಯಣಭೂತನೆಂಬೊ ನೀತನಾದ ದೂತನಂತೆ ೨

ಕೊಳಲ ಕೃಷ್ಣ ಧವಳಗಂಗಾ ಹೊಳೆಯೊ ಮುತ್ತಿನ ಗದ್ದಿಗೆ ಮ್ಯಾಲೆ
ಕಳೆಯು ಸುರಿವೊ ಕಮಲಪಾದ ಬಗೆಯ ಪೂಜೆ ೩

ಸನಕಾದಿ ಸುರೇಶನೆದುರು ಕಣಕ ಹೋಳಿಗೆಯನೆ ಮಾಡಿ
ಮನಕೆ ಬಂದ ಮೃಷ್ಟಾನ್ನವನು ಜನಕೆ ತೃಪ್ತಿ ಬಡಿಸುತಿರಲು ೪

ಸುತ್ತ ವೃಂದಾವನದ ಮಧ್ಯೆ ಉತ್ತಮರಾದ ವಾದಿರಾಜರು
ಸತ್ಯವತಿಯ ಸುತರ ಎದುರು ನಿತ್ಯಾನಂದ ಭರಿತರಾಗಿ ೫

ಸೃಷ್ಟಿಗಧಿಕಾನಂತಾಸನವು ಶ್ವೇತದ್ವೀಪ್ವೈಕುಂಠವೆಂಬೊ
ಮುಕ್ತ ಸ್ಥಳದಲ್ವಾಸನಾದ ಲಕ್ಕುಮಿ ತ್ರಿವಿಕ್ರಮನ ೬

ನೇಮನಿಷ್ಟ ಸೇವಕ ಜನಕೆ ಬೇಡಿದ ಇಷ್ಟಾರ್ಥ ಕೊಡುವೊ
**ಭೀಮೇಶಕೃಷ್ಣನ್ನ** ದಯದಿ ನೋಡಿದೆ ಹಯವದನನಂಘ್ರಿ ೭

(೩೮)

**ನೋಡಿದೆ ನೋಡಿದೆ ಗುರುರಾಜನಾ**
**ಮಹಾ ಸ್ವಾದಿಪುರದಿ ವಾಸಿಪನಾ ಹಯಗ್ರೀವನ**
**ಪಾದಾಶ್ರೀತನಾ ಆಹಾ!** ಪ

ಸಾಧುಕುಲವಂದ್ಯ ಸಜ್ಜನ ಪರಿಪಾಲ ಮೋದತೀರ್ಥರ
ಸಮಶೀಲ ಮದ್ಗುರುವಂದ್ಯಾ ಅ.ಪ

ವಾಗೀಶ ಮುನಿವರ ಜಾತಾ ಬಾಗುವೆ ನಿನಗೆ ಪ್ರಖ್ಯಾತಾ
ಭಾಗವತರಿಗೆಲ್ಲಾ ಬೋಧ ಮಾಡಿದ ರೂಪಾರಿಗಳನೆ ಗೆದ್ದ
ಬಾದರಾಯಣ ಪ್ರೀಯಾ ೧

ಬಂಧು ಬಳಗವೆನಗಿಲ್ಲ ನಿನ್ನ ನಂಬಿದೆನೋ ಮುನಿರಾಯಾ
ಬಂಧನ ಹರಿಸಿ ಸಾಧು ಸಂದೋಹದೊಳಗಿಟ್ಟು ಮನ
ಸಂದೇಹ ಬಿಡಿಸಿ ಶ್ರೀ ಇಂದಿರೇಶನ ತೋರೊ ೨

ಅಹೋಬಲದಿ ನಿನಗೆ ಹಾಕಿದ ಗರಳವ ಸೇವಿಸಿ
ಶ್ರೀ ಭಾರತೀಶನಂತೆ ಮೆರೆದೆ ಪ್ರಸನ್ನ
ಆ ಸುರಮುನಿ ಮೊದಲಾದ ಸಾಧುಸಜ್ಜನರಿಂದ
ಪೊಗಳಸಾಧ್ಯವೊ ಸದ್ಗುಣ ರನ್ನ ೩

ಪಂಚ ವೃಂದಾವನದಿ ನಿಂದ ವೇದ
ಪಂಚಗಳ ಪೊಗಳೊ ಛಂದ
ಪಂಚರೂಪದಿಂದ ಏಕಾಂತದೊಳಗೆ ಅನಂತನ್ನ
ಭಜಿಸುವ ಭೂತನಾಥನ ಪ್ರಿಯಾ ೪

ವೇದವೇದ್ಯರ ಸಂಸೇವ್ಯಾ ವೇದನಿಧಿಗಳ ಪೊರೆದ ಸುಧೀರಾ
ರಮಾ ತ್ರಿವಿಕ್ರಮ ದೇವನ ತರಸಿ
ತ್ರಿಸ್ಥಾನದೊಳಗೆ ಮೆರೆವ ನಮ್ಮ
ಪ್ರೇಮಕೃಷ್ಣನ ನಿಜನಾಮ ಪಡೆದಂಥ ೫

(೩೯)

**ನೋಡಿದೆ ರಾಜರ ನೋಡಿದೆ**

ನೋಡಿದೆನು ಗುರು ವಾದಿರಾಜರ
ಮಾಡಿದೆನು ಮನದಲಿ ವಂದನೆ
ಈಡು ಇಲ್ಲದೆ ವರವ ಕೊಡುವರ
ಬಿಡದೆ ಭಕುತರ ಪೊರೆವ ದಾತರ ೧

ಕುಸುಮಕಾಸಾರದಲಿ ಜನಿಸುತ
ಶಿಶುತನದ ಲೀಲೆಯನು ತೋರುತ-
ಅಸಮ ಯತ್ಯಾಶ್ರಮವ ಧರಿಸುತ
ವಸುಧೆಯೆಲ್ಲವ ಚರಿಸಿ ಮೆರೆದವ ೨

ಬದರಿ ಮಾರ್ಗದ ಜನರ ಬಾಧಿಪ
ಬೊಮ್ಮ ಭೂತವು ಬಂದು ವಾದಿಸೆ

ವಾದದಿಂದಲಿ ಸೋಲಿಸಿ ಅವನನು
ಪಾದಸೇವೆಗೆ ನಿಲಿಸಿಕೊಂಡಿಹ ೩

ಪಂಚವೃಂದಾವನದ ಮಧ್ಯದಿ
ಮಿಂಚಿಗೂ ಮಿಗಿಲಾಗಿ ಹೊಳೆಯುತ
ಪಂಚಭೇದವನೆಲ್ಲ ತಿಳುಹಿದ
ಪಂಚಬಾಣನ ಪಿತನ ಸ್ಮರಿಸುವ ೪

ಮೋದತೀರ್ಥರ ಮತವ ಸಾಧಿಸಿ
ವಾದಿಗಜ ಪಂಚಾನನೆನಿಸಿ ಕು-
ವಾದಿಗಳ ನಿರ್ನಾಮ ಮಾಡಿದ
ವಾದಿರಾಜರ ಭವ್ಯ ಮೂರ್ತಿಯ ೫

ಸಾಧುವಂದಿತ ಬಾದರಾಯಣ
ಪಾದ ಭಜಿಸುತ ಮೋದದಿಂದಲಿ
ಸೋದೆ ಕ್ಷೇತ್ರದಿ ನಿಂತು ನಿರುತದಿ
ವಂದಿಸುವರಿಗಭೀಷ್ಟ ಕೊಡುವರ ೬

**ಫಣಿಶಾಯಿವಿಠಲನೆ** ಗುಣಪೂರ್ಣನೆಂದು
ಜನಕೆಲ್ಲ ಅರುಹಿದ ಯತಿಕುಲರನ್ನರ
ವಿನಮಿತ ಭಾವದಿ ಅನುದಿನ ನೆನೆವರ
ಬಿಡದೆ ಪೊರೆಯುವ ಲಾತವ್ಯ ದೇವರ ೭

(೪೦)

**ಪಂಚ ವೃಂದಾವನದಿ ಮೆರೆಯುತಿರುವಾ ।**
**ಪಂಚಾಸ್ಯ ಸಂದಿಷ್ಟ ವೈಭವವ ಕೇಳಿ** ಪ

ವಿಪುಲ ಮತಿ ಪದಕರ್ಹ ಕಪಿಪ ರಾಮನ ಭಂಟ
ಸ್ವಪನದಾಖ್ಯಾನವನೆ ಶಪಥ ಪೂರ್ವಕದೀ
ವಿಪ್ರಗೋಸುಗವಾಗಿ ಸುಪ್ರಕಟ ಗೈದಿಹರು
ಅಪ್ರತಿಮ ಹಯಮೊಗನ ಸುಪ್ರೇಮ ಪಿಡಿದೂ ೧

ಆಖ್ಯಾನ ಪೆಟ್ಟಿಗೆಯು ಅಂಧಕಾರದಲ್ಲಿದ್ದು
ವ್ಯಾಖ್ಯಾತೃ ವೇದನಿಧಿ ಜನ್ಮ ತಾಳುತಲೀ ।
ವ್ಯಾಖ್ಯಾನ ಗೈದಾಗ್ಯು ಭಾವ ತಿಳಿಯದಲೇವೆ
ಪ್ರಖ್ಯಾತಿ ಪಡೆಯದಲೆ ಬೀಗ ಮುದ್ರಿತದೀ ೨

ಅಂಧ ಭಾವದೊಲೊಬ್ಬ ಪಂಗು ಭಾವದಲೊಬ್ಬ
ಇಂದಿರೇಶನ ಮಹಿಮೆ ಪ್ರಕಟ ಗೈಯ್ಯುವಲೀ ।
ಅಂಧ ಪಂಗುನ್ಯಾಯ ಆಶ್ರಯಿಸಿ ಪ್ರಕಟಿಸುವ
ಮಂದ ಜನರುದ್ಧಾರ ಕಾರ್ಯ ಗೈಸುತಲೀ ೩

ಅನುಮಾನತೀರಥರ ಶಾಸ್ತ್ರವನೆ ಮಥಿಸುತ್ತ
ತನುಮನ ಧನಧಾನ್ಯ ತೃಣವೆಂಬ ಕೀಲಿಯಲೀ ।
ಜ್ಞಾನ ಪೆಟ್ಟಿಗೆ ಬೀಗ ಮುದ್ರೆಯನೆ ತೆರೆಯುತ್ತ
ಮನದ ಪಾತ್ರಿಯಲುಣ್ಣಿ ಆಖ್ಯಾನದನ್ನಾ ೪

ಸಂತ ಸಂಗದಲಿಂದ ಮಂಥಿಸಲು ತತ್ವಗಳ
ಅಂತರಂಗದ ಕದವು ತೆರೆದಂತರಾತ್ಮನನು
ಕಂತು ಪಿತನಾದ **ಗುರುಗೋವಿಂದವಿಠಲನ್ನ**
ಅಂತರಂಗದಿ ಕಾಂಬ ಪಂಥವಿತ್ತವರಾ ೫

(೪೧)

**ಪರಿಪಾಹಿ ಗುರುರಾಜ ಶರಣರ ಪೊರೆಯುವ ಕವಿರಾಜ** ಪ

ಮರೆಯದೆ ನಿಮ್ಮನು ಸ್ಮರಿಸುವ ಪರಿಯನು
ಕರುಣಿಸೊ ಯತಿರಾಜ ಅ.ಪ

ನಿಗಮಾಗಮನ ಸುಗುಣ ಚರಿತನ
ಬಗೆಬಗೆ ಮಹಿಮೆಯ ಪೊಗಳುತಲಿ
ಖಗವಾಹನನಿಗೆ ಮಿಗಿಲಾದ ದೈವವು
ಜಗದೊಳಗಿಲ್ಲೆಂದರುಹಿದ ಗುರುವೇ ೧

ಸುಂದರ ವೃಂದಾವನದೊಳು ನೆಲೆಸಿದ ಸುರ-
ಮಂದಾರ ತರುವೇ
ಮಂದಭಾಗ್ಯರಿಗೆ ಕುಂದದ ಭಾಗ್ಯವಾ-
ನಂದದಿ ಕೊಡುವ ಗುರುವೇ ೨

ಮಂಗಳ ಮಹಿಮನನಂಗುಷ್ಟದಿ ಜನಿಸಿದ
ಗಂಗೆಯ ತಡಿಯಲಿ ನೆಲೆಸುತಲಿ
ರಂಗನ ಪೂಜೆಯ ಭಂಗವಿಲ್ಲದೆ ಗೈದ ಯತಿ-
ಪುಂಗವ ಗುರುವೇ ಹೇ ದೊರೆಯೇ ೩

ಮೂಢನು ಮೂರ್ಖನು ಮದೋನ್ಮತ್ತನು
ಕಡುಪಾಪಿಯು ನಾ ನಿಜವು
ಅಡಿಗಡಿಗೆ ನಿನ್ನಡಿಗಳಿಗೆರಗುವೆ
ಬಿಡದೆ ಪೊರೆಯೋ ಕರುಣಾನಿಧಿಯೇ ೪

ಬಾದರಾಯಣ ಪದ ಆರಾಧಕರನು
ಆದರದಲಿ ಪೊರೆಯುವ ಪರಮ ದಯಾಳುವೆ
ವಾದಿರಾಜ ಗುರುವೇ ನಿನ್ನವಶನಾಗಿಹ
**ಫಣಿಶಾಯಿವಿಠಲನ** ತೋರೆನ್ನ ಮನದಲಿ ೫

(೪೨)

**ಪಾಲಿಸೋ ಗುರುರಾಜ ಪಾಲಿಸೋ**
ಪಾಲಿಸೋ ಗುರು ವಾದಿರಾಜ ಪೊಗಳ –
ಲಳವೇ ನಿನ್‌ಮಹಿಮೆ ಮಹೋಜ ॥ ಅಹ
ಹಂಸ ಹಯಾಸ್ಯ ವರಾಹ ಕೇಶವ ಪ್ರಿಯ
ಹಂಸಾರೂಢ್ಯನೆ ನಮೋ ಶರಣು ಮಾಂ ಪಾಹಿ ಪ

ವಾಗ್ವಿಭವನು ಗುರುವರ್ಯ ॥ ಮಹಾ
ಯೋಗಿ ವರನು ಯತಿವರ್ಯ ॥ ಶಿರಿ
ವಾಗೀಶ ಕರ ಪದ್ಮದುದಯ ॥ ನಾಗಿ

ಜಗತ್ತಲ್ಲಿ ಮಾಡಿ ದಿಗ್ವಿಜಯ ॥ ಅಹ
ಜಗವನಳೆದ ಮೂರ್ತಿ ತರಿಸಿ ನಿಲ್ಲಿರಿಸಿ
ಪೊಗಳೆ ಮುಕ್ಕಣ್ಣಾದಿ ಸುರರೇ ಬಲ್ಲರು ೧

ಜೀವೋತ್ತಮ ವಿದ್ಯುತ್ಪತಿಯ ॥ ನಿತ್ಯ
ಆವೇಶಯುತ ವ್ಯಾಸರಾಯ ॥ ಮುನಿ
ಸಾರ್ವಭೌಮರ ಸೇರಿ ದಿವ್ಯ ॥ ವಾದ
ಮಾಧ್ವ ವೈದಿಕ ಬ್ರಹ್ಮವಿದ್ಯ ॥ ಅಹ
ಸುವಿಚಾರ ಪ್ರವಚನರತನಾಗಿ ಭುವಿ
ತತ್ವವ ಶ್ರುತಿ ಯುಕ್ತಿ ಯುಕ್ತದಿ ಬೋಧಿಸಿದ ೨

ಕೂರ್ಮತೀರ್ಥವು ಧವಳಗಂಗೆ ॥ ಅದರ
ನಿರ್ಮಲ ಲಲಿತ ತರಂಗ ॥ ಲಿಪ್ತ
ಧರ್ಮ ತೊಳೆದು ಪಾಪಭಂಗ ॥ ಮಾಡಿ
ಧರ್ಮ ಆಚರಣೆ ನಿಸ್ಸಂಗ ॥ ಅಹ ॥
ಬುದ್ಧಿಯ ಒದಗಿಸಿ ಗುರು ಸೇವಾರತಿಯಿತ್ತು
ಮಧ್ವಾಂತರ್ಗತ ಶ್ರೀಶನಲಿ ಭಕ್ತಿ ತೋರ್ಪುದು ೩

ಧವಳಗಂಗೆಗೆ ಪೂರ್ವಾದೇಶ ॥ ದಲ್ಲಿ
ದೇವದೇವೋತ್ತಮ ವ್ಯಾಸ ॥ ದೇವ
ಅವಲೋಕಿಸುತ ಇಹ ಪಂಚ ॥ ವೃಂದಾ
ವನ ಮಧ್ಯದಲ್ಲಿ ಪ್ರವೇಶ ॥ ಅಹ ॥
ಮಾಡಿದಿರಿ ತ್ರಿವಿಕ್ರಮನನಂತ ಗುಣಕ್ರಿಯ
ದೃಢಧ್ಯಾನೋಪಾಸನ ಮಾಳ್ಪ ಮಹಂತ ೪

ಪೂರ್ಣೇಂದು ಪೋಲುವ ಮುಖವ ॥ ಕಮಲ
ಕರ್ಣಿಕೆ ವರ್ಣದಿ ಪೊಳೆವ ॥ ಗಾತ್ರ
ಪೂರ್ಣಲಕ್ಷಣ ಸಂಯುತವ ॥ ದಿವ್ಯ
ಫಣಿಯಲ್ಲಿ ಪುಂಢ್ರವು ಊರ್ಧ್ವ ॥ ಅಹ
ಪೀತ ಸುವರ್ಣ ಸುರೇಶ್ಮಿ ವಸನ ಉಟ್ಟ
ಪದ್ಮಜ ಪಾದಾರ್ಹನೆ ನಿನ್ನ ಕಂಡೆ ನಾ ಶರಣು ೫

ಗುರುವಾದಿರಾಜ ನಿನ್ ದೂತ ॥ ವೀರ
ಭದ್ರನೋಪಮ ಬಲವಂತ ॥ ಬಾಧೆ
ವಿದ್ರಾವ ಕ್ಷಣದಿ ಮಾಳ್ಪಂತ ॥ ಅತಿ
ಶೂರ ಅದ್ಭುತ ಶಕ್ತಿಮಂತ ॥ ಅಹ ॥
ನಾರಾಯಣಾಹ್ವಯ ಭೂತರಾಜನು ಎನ್ನ
ಸಂರಕ್ಷಿಸುವ ಗುರುರಾಜ ನಿನ್ ದಯದಿ ೬

ಒಡೆಯ ಶ್ರೀಪತಿ ಹಯವದನ ॥ ತಾನೇ
ಕಡಲೆ ಮಡ್ಡಿಯನ್ನು ನಿನ್ನ ॥ ಕೈಯಿಂದ
ಉಂಡದ್ದು ಚತುರ್ದೇಶ ಭುವನ ॥ ಖ್ಯಾತಿ
ಈಡಿಲ್ಲ ಸ್ಮರಿಸೆ ಪಾವನ್ನ ॥ ಅಹ ॥
ಕುಸುಮಜಪಿತ ಉಕ್ತ ಅಭಯ
ಪ್ರಸನ್ನ ಶ್ರೀನಿವಾಸನ್ನೊಲಿಸೋ ಎನಗೆ ೭

(೪೩)

**ಪೊಂದಿ ಬದುಕಿರೊ ನಿತ್ಯ ಮಂದಾರ ತರುವಂತೆ**
ಕುಂದದಲಭೀಷ್ಟಗಳ ಗರೆವ । ಸುರ ತರುವಾ ಪ

ವಾಗೀಶ ಕರಜಾತ । ನಿಗಮಾರ್ಥ ಕೋವಿದರ
ಭೋಗಿಶಯನನ ಭಕುತ । ಭಾಗ್ಯ ದಾತೃಗಳ ।
ಯೋಗಿ ಕುಲವರ್ಯ ಹೃ । ದ್ರೋಗ ನೀಗುವರ
ಜಾಗು ಮಾಡದೆ ಭಜಿಪ । ಭಕ್ತರನು ಪೊರೆವರನು ೧

ಭವರೋಗ ಭೇಷಜರ । ಪದರಜವ ಧರಿಸುವರ
ಅವಗುಣಗಳೆಣಿಸದೆ । ಭವ ಭವಣೆ ಹರಿಸು ವರ ।
ನವ ನವ ಸ್ತೋತ್ರಗಳ । ಕವನ ರೂಪದಿ ಪೇಳಿ
ಪವನಾಂತರಾತ್ಮಕನ । ಪರಿತೋಷ ಗೈದವರಾ ೨

ನರಹರಿಯ ನೈವೇದ್ಯ । ಗರಳ ಮಿಶ್ರಿತವೆಂದು
ಅರಿತು ಭುಂಜಿಸಿದ । ಉರುತರದ ಮಹಿಮರನು ।

ಸಿರಿಹಯವದನನ । ಅಂಘ್ರಿ ಕಮಲಂಗಳನು
ನೆರೆನಂಬಿ ಸುಖಿಸುವರ । ಸರುವ ಭಯ ವಿರಹಿತರ ೩

ಉಕ್ತಿಯನು ಸ್ವಪ್ನದಲಿ । ಶಕ್ತ ಹಯಮುಖ ಪೇಳೆ
ಯುಕ್ತಿಮಲ್ಲಿಕೆ ಮಾಲೆ । ಮೌಕ್ತಿಕವನಿತ್ತವರ ।
ಭಕ್ತಿಪಥ ತೋರಿ ಕು।ಯುಕ್ತಿಗಳನೇ ಕಳೆದು
ಮುಕ್ತಿ ಮಾರ್ಗವ ತೋರ್ವ । ಭಕ್ತಿಯೋಗಿಗಳಾ ೪

ಮಾಯಿ ಶೈವರು ಶಾಕ್ತ್ಯ । ಅನ್ಯ ಮತಗಳ ಗೆದ್ದು
ಜಯಪತ್ರ ಘಂಟೆಗಳ । ವಿಜಯಸಾರಥಿಗಿತ್ತು ।
ಭಯವಿನಾಶನು ನಮ್ಮ । ತೋಯಜಾಂಬಕ ಸಿರಿ-
ಹಯವದನನರ್ಚಿಸುವ । ವಾದಿರಾಜರನೂ ೫

ಸೋದೆ ಮಠವಾಸ ಸ । ದ್ಭಕುತ ಜನ ತೋಷ
ಮೋದತೀರ್ಥರ ಪ್ರೀಯ । ವಿಬುಧಜನ ಗೇಯಾ ।
ವಾದಿಗಜಸಿಂಹ । ಅದ್ವೈತ ತಮ ಸೂರ್ಯ
ಮೇದಿನೀ ಸುರವಂದ್ಯ । ಶ್ರೀ ವಾದಿರಾಜರನೂ ೬

ಭಾವಿ ಮಾರುತಿಯ । ದಿನ ದಿನದಿ ಪ್ರಾರ್ಥಿಪರ
ಭಾವಕೊಲಿಯುತ ತೋರ್ವ । ಹಯ ಮುಖಾತ್ಮಕನು ।
ಭಾವಜನಯ್ಯ **ಗುರುಗೋವಿಂದವಿಠ್ಠಲನ**
ಭವ್ಯ ರೂಪವ ಹೃದಯದವಕಾಶದೊಳಗೇ ೭

(೪೪)

**ಬಯಕೆಗಳ ಪೂರೈಸು ಭವ ಭೀಮ** ಪ

ಭಯಗಳನು ತಡೆದು ಪೊರಿಯೊ ಭಾವಿ ಭಾರತೀಪ್ರೇಮಾ

ನಿನ್ನವನೆಂತೆಂದು ಮನದಭಿಲಾಷೆಗಳ ಸಲಿಸೊ
ಪರಮ ಕರುಣಿ ದಾನಿ ೧

ಇಂದಿನಾಪರಿಯಂತ ಬಹುವಿಧದಿಂದ ಪ್ರಾರ್ಥಿಸಲು
ಕರುಣ ಬಾರದಾಯಿತೆ ಬಿರುದು ಪೋಯಿತೋ ೨

ಕೀರ್ತಿ ಅಪಕೀರ್ತಿ ಎರಡೂ ನಿನ್ನಾಧೀನವೇ ಸ್ವಾಮಿ
ತಂದೆವರದಗೋಪಾಲವಿಠ್ಠಲನ ದಾಸಾಗ್ರಣಿಯೇ
ಸೌಭಾಗ್ಯನಿಧಿಯೇ ೩

(೪೫)

ಬರಿದೆ ಮೋಹದೊಳು ಬೆರೆದೆನಮ್ಮ ಪ

ಗುರು ವಾದಿರಾಜಾರ್ಯರ ಚರಣಗಳ ಮರೆತೆ ಅ.ಪ.

ಸರ್ವಜ್ಞಗುರು ಮತವ ನಿರ್ವಹಿಸಿ ಮಾಯಿಗಳ
ಗರ್ವವನು ಮುರಿದು ರವಿ ಶರ್ವ ಗಣಪತಿ ಶಕ್ತಿ
ಪೂರ್ವ ದೇವತೆಗಳನು ಸರ್ವಪರರೆಂದೊರೆವ
ದುರ್ವಾದಿಗಳ ಭಂಗಿಸಿ ಹಯವದನ
ನೋರ್ವ ಪರದೈವವೆಂದು ಮೆರೆದಂಥ
ಪಾರ್ವತೀವರವಂದ್ಯ ಪದಪಾತ್ರ ನೆನೆವೆ ೧

ಅಂತರ್ಬಹಿಃಶತ್ರು ಸಂತತಿಯ ಗೆಲುವ ಕಂ-
ಸಾಂತಕನ ಹೃದಯ ಕಮಲಾಂತದಲಿ ತೋರಿಸುವ
ಚಿಂತಿತಾಭೀಷ್ಟಗಳ ನಿಂತು ಪಾಲಿಸುವ ಸುರ
ಚಿಂತಾಮಣಿಯನು ಪರಮಾಂತರಂಗದಿ ಕೊಡುವ
ಕಂತುಕೃತ ಬಾಧೆಯನು ನಿಲದಂತೆ ಸಂತೈಸಿ ಸುಜನರನು ಕಾವ ಕ-
ಲ್ಪಾಂತದಲಿ ಪವಮಾನನಾಗುವನ ಮರೆದೆ ೨

ಮೂರಾರು ಎಂಭತ್ತು ಭೂರಿಕಲ್ಪಗಳಲ್ಲಿ
ಶ್ರೀರಮಾರಮಣ ಪದವಾರಿಜಗಳನು ಭಜಿಸಿ
ತೋರಿ ವೈಷ್ಣವ ತತ್ವಸಾರವನು ಸಮುಧರಿಸಿ
ಮಾರುತನ ಮತವೇ ಮಧುವೈರಿ ಪ್ರಿಯಕರವೆನಿಸಿ

ಧೀರಕವಿ ವೀರನಾಗಿರುವ ಸೋದೆಯಲಿ ತೋರಿ
ತನ್ನಿರವ ಶುಭ ಕರವ ಜ್ಞಾನಸುಖ
ಸಾರ **ವೆಂಕಟಪತಿಯ** ಮನದಿ ಧರಿಸಿರುವ ೩

(೪೬)

**ಬೇಡುವೆ ನಿನ್ನನೆ ಶ್ರೀಹರಿ ದಯಮಾಡಿ ನೀಡಿದನೆ** ಪ

ರೂಢಿಯೊಳಗೆ ಮೂಢಜನರ ನೋಡದಂತೆ ನಿನ್ನ
ಪಾಡಿ ಪೊಗಳುವ ಮತಿ ನೀಡಯ್ಯ ನೀ ಬಂದು ಅ.ಪ

ಪಾದಾದಿ ಶಿರಪರಿಯಂತ ವೇದವಿಖ್ಯಾತ
ಆದಂಥ ಮಹಿಮೆ ಅರಿಯೆ
ಸೋದೆರಾಜರ ಹೃದಯದಿ ನೀನಿರು-
ವದು ಕೇಳಿ ಸ್ಮರಿಸದೆ ಕೇಳು ಧೊರೆಯೆ
ಮೋದತೀರ್ಥರ ಮತದಭಿಮಾನ ಇದ್ದವರ
ಮೋದದಿಂದರುಹಯ್ಯ ಆದಿ ಭೂವರಹರನೆ ೧

ದಯಮಾಡೊ ಹಯವದನ ಭವಭಯಕಂಜಿ
ಮೊರೆ ಹೊಕ್ಕೆನಯ್ಯ ನಿನ್ನ ಭಯಪರಿಹಾರಿಯನ್ನ
ಗುರುವರ್ಯ ನಿನ್ನ ನಿಜದಾಸ ಕೇಳಾತನ್ನ
ಮುನಿವರ್ಯ ಪೇಳಿದರೆ ಮೋದದಲಿ ಬಂದು
ಸಾಧಿಸುವೆನು ಸಿದ್ಧಿ ಬುದ್ಧಿ ಪ್ರೇರಿಸು ತಂದೆ ೨

ಲಾತವ್ಯಪದ ರಾಜರಿಗೆ ಸುಳ್ಳೆಂಬುವ ಮಾಯಾ-
ವ್ರಾತ ಖಂಡಿಪೆ ಕೈಯಾಗೆ ವೇದ
ವ್ರಾತ ಖಡ್ಗವ ಕೊಡು ಈಗೆ
ಭೂತಳದಿ ಡಂಗುರ ಹೊಯಿಸುವೆ ಕೇಳಿಸೆ
ದಾತ **ಶ್ರೀಕೃಷ್ಣವಿಠಲ** ಶ್ರೀನಿವಾಸನ
ದೂತ ವಾದಿರಾಜ ಎನ್ನ ತಾತನಹುದೆಂಬೋದು ೩

(೪೭)

(ಶ್ರೀ ವಾದಿರಾಜರ 'ರುಕ್ಮಿಣೀಶ ವಿಜಯ'ದ ಪ್ರಶಂಸಾ ಕೀರ್ತನೆಯಿದು)

ಭಾಗವತರ ಕಥೆಯೇ ಕಥೆಯು ಮಿಕ್ಕ ಪ

ಕಾಗಿ ಗುಬ್ಬಿಯ ಕಥೆಗಳು ಬರಿ ವ್ಯಥೆಯು ಅ.ಪ.

ರೀತಿ ನೀತಿಗಳಿಲ್ಲ ಮಾತು ಮಧುರವಿಲ್ಲ
ಪ್ರೀತಿ ಲಕ್ಷಣ ಬಲು ಭೀತಿಕರ
ಸೋತ ಹಾಸ್ಯವು ಸಪ್ಪೆ ಮಾತಿನ ಸುರಿಮಳೆ
ನೂತನ ಕಥೆಗಳು ಪ್ರೇಮದಂತಿರುವುದು ೧

ಪೋಕರಿ ಜನಗಳ ವೈಖರಿಗಳನು ಅ-
ನೇಕರು ಬರೆದು ಕವಿಗಳಾದರು
ಲೋಕದ ನಡೆನುಡಿ ತಿದ್ದಲಾರದ ಕಥೆ
ಮೇಕೆಯ ಕತ್ತಿನಲ್ಲಿರುವ ಸ್ತನದ ಪರಿ ೨

ಕಂಡು ಕೇಳದ ನಡೆ ನುಡಿಯುಳ್ಳ ನಾಯಕ
ಹಿಂಡಿದ ಕುಸುಮ ಪೋಲುವ ನಾಯಕಿ
ಭಂಡತನಗಳೇ ಪ್ರಚಂಡ ಶೌರ್ಯವು
ರಂಡೆಯ ಕೊರಳಿನ ಕರಿಮಣಿಯಂತಿದೆ ೩

ವ್ಯಂಗ್ಯವೇ ಕವಿತೆ ಲಕುಮಿ ಮೃದು ಹೃದಯವು
ಶೃಂಗಾರಗಳೇ ಸುಂದರ ರೂಪ
ರಂಗನು ಕೊಡುವ ಹಾಸ್ಯಗಳು ಮನೋಹರ
ಇಂಗದ ಸವಿಯಧರಾಮೃತ ಧಾರೆಯು ೪

ಚಂದ್ರ ಸೂರ್ಯರು ಸಪ್ತಸಿಂಧು ಭೂಧರ ಸರಿ
ದ್ವೃಂದನಭೋರು ದಿಕ್ಕುಗಳೆಲ್ಲಾ
ಕಂದುಕ ಕರತಲದಲಿ ಹೊಳೆಯುತಲಿರು-
ವಂದದಿ ನಮ್ಮ ಕವೀಂದ್ರರಿಗೆ ೫

ಕಲ್ಲು ಕರಗಿ ಒಣಹುಲ್ಲು ಚಿಗುರುವುದು
ನಿಲ್ಲಲಾಗದೆ ಕುಣಿವುವು ಮುದದಿ
ಹುಲ್ಲೆ ಹುಲಿಯ ಪ್ರೇಮದ ಪಡೆವುದು ಕವಿ
ಮಲ್ಲರು ಬರೆವ ಶ್ರೀನಲ್ಲನ ಕಥೆ ಕೇಳಿ ೬

ನಾನು ನನ್ನದು ಎಂಬ ಅಭಿಮಾನವ ಬಿಟ್ಟು
ಮಾನಸ ಕಲ್ಮಷಗಳ ತೊರೆದು
ಧ್ಯಾನದಿ ಬಿಂಬ ಮೂರುತಿ ದರುಶನ ಮಾಡಿ
ಆನಂದಪಡುವ ಬಗೆಯ ತೋರುವ ಕಥೆ ೭

ಸಕಲ ಪದ್ಯಗಳಲ್ಲಿ ಪ್ರಕೃತಿಯ ಸೌಂದರ್ಯ
ಭಕುತಿ ಪ್ರವಾಹವ ಹರಿಸುವುದು
ಶುಕರ ನುಡಿಗೆ ನವಶಕುತಿಯ ಕೊಡುವುದು
ರುಕುಮಿಣಿರಮಣನ ವಿಜಯದ ಕಥೆಯಿದು ೮

ನಾಡಿನ ನುಡಿಗಳ ಜೋಡಿಸಿ ಕುಶಲರು
ಪ್ರೌಢವಚನಗಳ ಮಾಡುವರು
ನೋಡಿ ನೋಡಿರುವ ಸಾಮಾನ್ಯ ವಸ್ತುವು ತಲೆ
ಯಾಡುವ ತೆರದಿ ವಿಚಿತ್ರವಾಗುವ ಕಥೆ ೯

ತಲೆಯ ನೋಯಿಸುವಂಥ ಶಾಸ್ತ್ರದ ವಿಷಯವ
ಸುಲಿದ ಬಾಳೆ ಹಣ್ಣಿನಂದದಲಿ
ಸುಲಭದಿ ಸವಿಯನುಭವಿಸಲು ಸಾಧನ
ಲಲಿತ ಕವಿತೆಯಿದು ಕಲೆಯ ಅವಧಿಯಿದು ೧೦

ಅನ್ಯ ಕಥೆಗಳೆಲ್ಲಾ ಸಣ್ಣ ಜನರಿಗೆ
ಮಾನ್ಯವಿರಲಿ ಇದ್ದರೇನಾಯ್ತು
ಪುಣ್ಯ ಸುಖವಹ ಇಹಪರದಲಿ ಕೊಡುವ ಪ್ರಸನ್ನ
ಶ್ರೀರುಕುಮಿಣೀ ರಮಣನ ಕುಣಿಸುವ ೧೧

(೪ಲ)

**ಭಾವಿ ಭಾರತಿರಮಣ ಶ್ರೀಮದ್ವಾದಿರಾಜ ಪ್ರಭೋ** ಪ

ವಂದಿಸುವೆನಿವರ ಪಾದದ್ವಂದ್ವಗಳಿಗೆ
ವೃಂದಾವನದೊಳಿಹ ಸೌಂದರ್ಯ ಮೂರುತಿಗೆ
ಒಂದೊಂದು ಅವಯವದೊಳು ಸುರವೃಂದ ಸ್ಮರಿಸೀಗ ಆ-
ನಂದದಿಂದರ್ಚಿಸುವೆ ಮನಕೆ ಹರುಷವಾಗೊ ಹಾಗೆ ೧

ಒಂದೊಂದು ವಿಂಗಡಿಸಲೆನಗಸಾಧ್ಯ ತೋರುವುದು
ಪಾದಾದಿ ಶಿರಪರಿಯಂತ ಭಗವದ್ರೂಪ ವ್ಯಾಪಿಸಿದ್ದುದು
ಮುಂದೆ ಶೇಷಪದಾರ್ಹ, ಭಾವಿರುದ್ರನೆ ಬಲ-
ನಿವರ ದೇಹದೊಳಿದ್ದು ಮುದ್ದು ವಾದಿರಾಜನ
ದಕ್ಷಿಣ ಪಾದಾಂಗುಟದಿ ಸರ್ವ ತೀರ್ಥಗಳ ನೆನೆದು ೨

ಭೀಷ್ಮ ಪೇಳಿದ ಧರ್ಮರಾಯಗೀ ನೀತಿ ಅ-
ವಿಸ್ಮಯ ಜನರು ವಂದಿಸುವರು ವಾದಿರಾಜರಿಗೆ
ಈ ರೀತಿ ಮನದ ಕಲ್ಮಶ ಕೊಳೆದ ಸುಜಾತಿ
ವಿಸ್ಮಯವಾಗದೆ ಕೇಳಿರೊ ಈ ಗುರುಗಳೊಳಿದ್ದ ಖ್ಯಾತಿ ೩

ಐಹಿಕ ಸುಖಾಪೇಕ್ಷೆ ಮಾಡುವರಿಗೊಲಿಯ
ಸ್ವಹಿತ ಸುಖಪೂರ್ಣ ಮುಕ್ತ ಬ್ರಹ್ಮನೆಂಬುವುದು ಖರಿಯಾ
ಅಹಿ ಗರುಡ ಮೃಡರಿಂಗಿತ ಪಿರಿಯಾ
ಮಹಿಯೊಳಗೀಪರಿ ತಿಳಿದೊಂದಿಪರ ಮರೆಯಾ ೪

ಸೋದೆ ಸ್ಥಳದಲಿ ನಿಂತ ಭಾವಿ ಭಾರತಿಕಾಂತ
ಸಾಧಿಶ್ಯಾತ್ರಿಗೆ (ಸಾಧಿಶಿ+ಯಾತ್ರಿಗೆ) ಬರುವವರ ಮನೋವೃತ್ತಿ ಬಲ್ಲಾತ
ಶೋಧಿಸದೆ ಕೊಡು ಚತುರ್ವಿಧ ಪುರುಷಾರ್ಥದಾತ
ಶ್ರೀದ **ಶ್ರೀಕೃಷ್ಣವಿಠಲ** ಶ್ರೀನಿವಾಸನ ದಾಸನಾಗುವನೊ ಪ್ರೀತ ೫

(೪೯)

**ಭಾವಿಭಾರತಿವರನೆ ದಾಸನ ಬೇಗ ಕಾವ ಕಲುಷ ಹರಸಿ**
ದೇವ ಋಜುಗಣನಾಥನೀಪರಿ ಸಾವಕಾಶಕೆ ಸಮಯವಲ್ಲಿದು ಪ

ಅರಿಷಡ್ವರ್ಗದಿ ಸಿಲುಕಿ ಕ್ಷಣ ಕ್ಷಣ ಕರಗಿ ಕುಂದುತ ಬಂದೆನು
ಮರಿಯಾದಿಯಂಬುವ ಮರತು ಮನದಿ ನಾನಾ
ಪರಿಯ ಕ್ಲೇಶದಿ ನೊಂದೆನು ಮುಂದೇನು
ದುರಿತ ರಾಶಿಗಳನ್ನು ಬೇಗದಿ ತರಿದು ಸಜ್ಜನ ಗುಣವ ಸುಲಭದಿ
ಪೊರೆದನೆಂಬೈತಿಹ್ಯ ವಚನದಿ ಭರವಸದಿ ನಂಬಿರುವೆ ನಿನ್ನನು ೧

ತುರಗವದನ ದೇವನ ವಲಿಸಿ ದೇವ ನರವರ ಸಂಘವನು
ಸರಸಿಜ ವದನ ನಿಸ್ಸೃತ ವಾಕುಸುಧಾರಸ ಕರೆದು
ತಂಪೇರಿಸಿ ಸರಿಯೆನಿಸಿದೆನೆ
ಹರಿಯೆ ತಾನೆಂದೊದರಿಕೊಂಡಿಹ ನರಕ ಭಾಜಿಗಳಾದುಮಾಯ್ಗಳ-
ನರಿದು ವಾದದಿ ಮುರಿದು ಹಲ್ಲನು ಸಿರಿವರನ ಸತ್ಕರಿಸಿ
ಪೂಜಿಪ ೨

ವನಜಾಕ್ಷ ರಾಮಭಕ್ತನಾಗಿಹ ವಿಭೀಷಣಗೆ ಮಾರುತಿಯಿಂದುತ್ತ-
ಮನುವ ನೀನೆಂದನುಗಾಲ ಜಪಿಸುವೆನು ಅದನರಿತು
ಮುಂದಿನ ಫಲ ನೀಡೆಂದು
ಮಣಿದು ಬೇಡುವೆ ನಿನ್ನ ಪದಯುಗ ವನರುಹಗಳನವಶ್ಯದಾಯಕ
ಮನದಿ **ವೆಂಕಟನಾಥ**ನಂಘ್ರಿಯ ನೆನೆವ ಭಾಗ್ಯ ನಿತ್ಯ ಕರುಣಿಸು ೩

(೫೦)

**ಭೂತರಾಜನಯ್ಯ ವಂದಿಪೆ ವಾದಿರಾಜ ಜೀಯ** ಪ

ಖ್ಯಾತಿಲಿ ಸುಜನರ ವಾರ್ತೆಯನಾಲಿಸಿ
ಆರ್ತರ ಪೊರೆದೆಯೊ ಹರಪನಹಳ್ಳಿಯ ಅ.ಪ

ವಾಗೀಶರ ಕರಜಾತ ಗುರುವೆ ಬಾಗುವೆ ಯೋಗಿವರ್ಯ
ಜಾಗು ಮಾಡದೆ ಭವ ಬಂಧನ ಬಿಡಿಸೊ
ಭೋಗಿಶಯನಪ್ರೀಯ ಭಾವಿಸಮೀರನೆ ೧

ಹೆತ್ತ ಜನನಿ ಹರಕೆ ಶೀಘ್ರದಿ ಸಲ್ಲಿಸಿದೆಯೊ ಹರಿಗೆ
ಸಚ್ಚಿತ್ತದಿ ಬಹು ಭಕ್ತಿಲಿ ರಚಿಸಿದ
ಅಚ್ಚ ಬಂಗಾರದ ಲಕ್ಷಾಭರಣವ ೨

ಲಕ್ಷ್ಮೀತ್ರಿವಿಕ್ರಮನ ಸೋದೆಲಿ ಸ್ಥಾಪಿಸಿ ಭಕ್ತಿಯಲಿ
ಅಕ್ಷರೇಡ್ಯ **ಪಂಢರಿನಾಥವಿಠಲ**ನ
ವೀಕ್ಷಿಸಿ ವಿಕ್ರಮನ ಉತ್ಸವಗೈದೆಯೊ ೩

(೫೧)

**ಮಂದಾರ ತರುವೇ । ನಾ ಬೇಡುವೇ ।**
ಮಂದಾರ ತರುವೇ ಪ

ಇಂದುಮೌಳಿನುತ । ಸಂದರುಶನ ತವ ಅ.ಪ

ಋಜುಗುಣ ಚಕೋರಕೆ ಚಂದಿರ ।
ಭಜಿಪರಭೀಷ್ಟದ ಮುನಿವರ ।
ವಿಜಯಸಾರಥಿ ಪದ ಬಿಸಜಯುಗಳದಿ
ನಿಜ ಗತಿಯ ಕೊಡುತ ನಡೆಸು ಸುಪಥದಿ ೧

ದಶರಥ ಹರಿ ವಚೋನಯ ।
ಅಸುಪತಿಪರಿಕೃಷ್ಣ ವಚೋನಯ
ಯಶದಿ ಮೆರೆದು ಮುಂಬರುವ ಅಸುಪತಿ
ವಸುಧೆಜೆರಮಣನ ಯಶವ ನುಡಿಸು ಯತಿ ೨

**ಗುರುಗೋವಿಂದವಿಠಲಾ**ರಾಧಕ ।
ನಿರುತ ಮಂಗಳ ಮಹಿಮದ್ಯೋತ

ವರ ವಿಷಯವರುಹು ಭವತಾರಕನಿರುತಿಹೆ
ಮುದಮುನಿ ಮತೋದ್ಧಾರಕ ೩

(೫೨)

(ಸುಳಾದಿ)

**(ಧ್ರುವತಾಳ)**
**ಮಾಧವನಂಘ್ರಿ ನಿತ್ಯ ಮೋದದಿಂದಲಿ ಭಜಿಪ**
ಸಾಧು ಸನ್ಮುನಿವರ್ಯ ಸಮ್ಮೋದ ತೀರ್ಥರ
ಸಾದರದಿಂದ ಭಜಿಸಿ ಮೇದಿನಿಗೆ ಭಾರ
ವಾದ ಮಾಯಾವಾದಿಗಳ ಗೆದ್ದೆ
ವಾದಿರಾಜರ ಮಹಿಮೆ ವರ್ಣಿಸಲು ಅರ್ಹನಲ್ಲೆ
ಮಾಧವ ವೇದವೇದ್ಯ ನಮ್ಮ ವಿಜಯವಿಠಲ
ಆದದರಿಂದವರೆರಡು ಭುಜದಿ ಹಯವಕ್ತ್ರನಾಗಿ
ಪಾದವನಿಟ್ಟು ಸ್ವಾದವಾದ ಕಡಲೆ ಹೂರಣವನುಂಡ
ಶ್ರೀಧರನ ಮಹಿಮೆ ಸಾಧು ಜನರು ಕೇಳಿ ೧

**(ಮಟ್ಟತಾಳ)**
ಕಡಲಲಿ ಪವಡಿಸಿದಾ ಒಡೆಯ ತಾ ಪೊಡವಿಯಲಿ
ಮೃಡನುತ ಗೋವಿಂದಾ ಜಡದ್ಧರಿವಾಣದಲಿ
ಕಡಲೆ ಸಕ್ಕರೆ ಬೆರೆಸಿ ಮಡ್ಡಿ ಮಾಡಿದ
ಸಡಗರದಾ ಭಕ್ಷ್ಯ ಲಡ್ಡುಗೆ ಪಾಯಸ ಘೃತ-
ದಡುಗೆ ಬ್ರಹ್ಮಾದಿ ಪರಿವಾರಸಹಿತುಂಡು
ಕಡೆಗೋಲು ನೇಣು ಪಿಡಿದುಡುಪಿಯೊಳಗೆ ನಿಂದ
ಉಡುರಾಜಮುಖ ನಮ್ಮ ವಿಜಯವಿಠಲರೇಯ
ಬೆಡಗು ಕಾರ್ಯವನ್ನು ನಡೆಸಿದ ಬಗೆ ಕೇಳಿ ೨

**(ತ್ರಿಪುಟತಾಳ)**
ತಾಮಸ ಗುಣವುಳ್ಳ ಪಾಮರ ಜನರಿಗೆ
ಈ ಮಹಿಮೆ ದೊರಕುವುದೇ ಸ್ವಾಮಿ ಸಿಲುಕುವನೆ
ಕಾಮಿಸಿ ಕೋಟಿ ವರುಷ ನಾಮ ನುಡಿದುದರಿಂದ ಪರಂ-

ಧಾಮ ದೊರೆಯದು ಭೂಮಿಯೊಳಗೆ ಬಂದ
ಭ್ರಾಮಕ ಜನರಿಗೆ ವಾಮದೇವನೆ
ಹಿರಿಯನೆಂದು ಬುದ್ಧಿಯ ಕೊಡುವ
ಕಾಮಾರಿ ವಂದ್ಯ ನಮ್ಮ ವಿಜಯವಿಠ್ಠಲನು
ಸಾಮಾನ್ಯ ಜನರಿಗೆ ದೊರಕುವನೆ ಕೇಳಿ ೩

(ಅಟತಾಳ)
ಅಜ ಸತ್ಯಲೋಕಾಧಿಪತ್ಯವನು ಮಾಡಿ ದಿ-
ಗ್ವಿಜಯ ಮಾಡಲು ಪುರಕೆ
ನಿಜ ಸುಜ್ಞಾನ ಸುಪೂರ್ಣಪ್ರಜ್ಞರೆಂಬೋ ಮುನಿಯು
ಅಜನ ಪದಕೆ ಬಂದು ಅಖಿಳರನಾಳುತ್ತಿಪ್ಪ
ನಿಜವಾಯು ಹನುಮ ಭೀಮ ಮಧ್ವರಾಯರು
ವಿಜಯಸಾರಥಿ ಪಾದರಜದ ಮಹಾತ್ಮೆಯಿಂದ
ಗಜವೈರಿ ಭಂಜನ ವಿಜಯವಿಠಲನ್ನ
ಭಜನಿಯ ಗೈಯುತ ಬಹುಕಾಲದಿ
ಋಜುಗಣ ಪಂಕ್ತಿಯೊಳಗೆ ಕುಳಿತಾ
ನಿಜ ನಿರ್ಮಲ ಸುಜ್ಞಾನ ಧ್ಯಾನದಿಂದ
ಜ್ಞಾನಪಕ್ವಾದ ಮಾನವುಳ್ಳ
ಸುಜನ ಶಿರೋಮಣಿ ವಾದಿರಾಜನು ತಾ
ನಿಜವಾಗಿ ಬೊಮ್ಮಾಂಡ ಪುರಾಣ ಸಾಧಕರಿಂದ
ಅಜನ ಪದ ಸಲುವುದು ಲೇಶ ಸಂಶಯ ಬ್ಯಾಡಿ
ನಿಜ ನಿಜ ನಿಜವೆಂದು ನಿತ್ಯದಿ ಕೊಂಡಾಡಿ ೪

(ಆದಿತಾಳ)
ಮನಶುದ್ಧರಾಗಿ ಮಾಧವನಂಘ್ರಿ
ದಿನದಿನದಲ್ಲಿ ನಂಬಿ ಅನವರತ
ಆನಂದಪಡುವ ಮಧ್ವರಾಯರ ಪಾದದ ಮಹಿಮೆ
ಅನೇಕ ಜನ್ಮ ಬಹು ಪುಣ್ಯದಿಂದ ಲಬ್ಧ-
ವೆನುತ ತಿಳಿಯಲುಬೇಕು
ಹನುಮೇಶ ಸಿರಿ ವಿಜಯವಿಠಲ ಪಾದ
ವನಜಾದಿಗಳನ್ನು ನಂಬಿಕೊಂಡಿಪ್ಪ ವಾದಿರಾಜ

ಮುನಿಯು ಸಾಮಾನ್ಯರೆಂದು ಎಣಿಸಿದ ನರರಿಗೆ
ಘನವಾದ ಶಿಕ್ಷೆಯೀವನು ಇನಸೂನು ಕೋಪದಿಂದ
ಮನದಲಿ ಇಟ್ಟುಕೊಂಡು ಮಹಿಮೆ ಪಾಡಿ ಕೊಂಡಾಡಿ ೫

ಜೊತೆ
ಮೋದತೀರ್ಥರ ಮತ ಸೇನಾಧಿಪತಿಯಾದ
ವಾದಿರಾಜ ಮುನಿಯು ವಿಜಯವಿಠಲನ ದಾಸ

(೫೩)

**ಮುನಿಯೆ ನಿನ್ನ ಬಲವೆನಗೆ ಮುಖ್ಯ ಬಲವೋ**
ಘನ ದಯಾಂಬುಧಿಯಾದ ನಿಗರ್ವಿ ವಾದಿರಾಜ ಪ

ಯತಿಯೆ ನಿನ್ನಯ ತೇಜವೆನಗಿನ್ನು ಭಾನು ಬಲ
ಹಿತ ಮುಖಾಬ್ಜದರುಶನವೇ ಹಿಮಕರ ಬಲ
ಅತಿಶಯದ ನೋಟಗಳೇ ಅಸಮ ತಾರಾಬಲ
ಮತಿವಂತ ನಿನ್ನಂಗ ಮಂಗಳ ಬಲ ೧

ಗುರುವೆ ನಿನ್ನಯ ಜ್ಞಾನ ಗುಣವೆನ್ನ ಬುಧಬಲ
ಗುರು ಶಿರೋಮಣಿಯೆಂಬುದೇ ಗುರುಬಲವು
ಪೊರೆವುದೆನ್ನ ಸುಜನರೊಳು ಹೊಂತಕಾರಿ ಶುಕ್ರಬಲ
ಸರಿ ಇಲ್ಲದಾ ನಿನ್ನ ಮಹಿಮೆ ಶನಿಬಲವೊ ೨

ಉನ್ನಂತ ನಿನ್ನ ದಂಡ ಉತ್ತಮದ ಕೇತುಬಲ
ನಿನ್ನ ಶಯ್ಯಾಸನ ಸೇವೆ ನಿಜ ರಾಹುಬಲ
ಚೆನ್ನಿಗ ಮುದ್ದುಹಯವದನನ ಚಿಂತನೆಯುಳ್ಳ ವಾದಿರಾಜ
ನಿನ್ನ ಕೊಂಡಾಡುವುದೆನಗೆ ನಿತ್ಯ ಸಮಸ್ತ ಬಲವೊ ೩

(೫೪)

**ರತ್ನ ದೊರಕಿತೊ ಎನಗೆ ಶುಭದ ರತ್ನ ದೊರಕಿತೊ**
ಅತ್ಯಧಿಕ ಬೆಲೆಯುಳ್ಳ ಭಾವಿ ಮಾರುತರೆಂಬ ಮಹರತ್ನ ಪ

ವೇದವೇದ್ಯರ ಗುರುಗಳಾಗಿ ಮೋದತೀರ್ಥರ ಮತದ ಸಾರ
ಬೋಧಿಸುತ ಇರುಳು ಹಗಲೂ ವೇದವ್ಯಾಸರ ಸೇವಿಪ ರತ್ನ ೧

ದಾಸಜೀವರ ಪೋಷಿಸುತ್ತ ಹರಿದಾಸರಾಗಿ ಪದ ಸುಳಾದಿಯ
ಉಲ್ಲಾಸದಿಂದ ಪಾಡಿ ಪೊಗಳುವ ವಾಸುದೇವನ
ಕೌಸ್ತುಭ ರತ್ನ ೨

ಶುದ್ಧಾಂತಃಕರಣದಿ ನಿಂತು ಶ್ರದ್ಧಾಭಕ್ತಿಯ ಸೇವೆಯ ನೀಡಿ
ಶ್ರೀಮುದ್ದುವಿಠಲಗರ್ಪಿಸುವೊ ವಾದಿರಾಜರೆಂಬೊ ಮಹರತ್ನ ೩

(೫೫)

ರಥವಾನೇರಿದಾ ವಾದಿರಾಜೇಂದ್ರ ಸದ್ವೈಷ್ಣವ ಕುಮುದಕೆ ಚಂದ್ರ
ಸತತ ಸ್ಮರಿಸುವರಿಗೆ ಮುಕುತಿ ಕೊಡುವೆನೆಂದು
ಹಂಸಪತಿಜವತರಿಸುವಾ ಅಂಶಾಂಶದಲಿಂದಾ ಪ

ಅತುಳಾ ಮಹಿಮನು ನೀನೆಂದೂ ಶೃತಿ ಸಾರುತದೆಂದು
ಪಶುಪತಿ ಮಿಗಿಲಾದವರು ಬಂದು ಪಾಡುತಲಿಹರೆಂದು
ಅತುಳ ಮಹಿಮನೆ ತವಪಾದಾಶ್ರಿತರಾಗಿರುತಿಹರ
ಪಾತಕವಾ ಕಳೆದು ನಿಜಗತಿಯ ಕೊಡುವೆನೆಂದು ೧

ಕಾಲಾಕಾಲವೀದೆಂದು ಸುರಪತಿ ಶಶಿಋತುವಿಲಿ ಬಂದು
ಸೇವಾ ಮುಟ್ಟಿಸಬೇಕೆಂದು ವೀಮಾನವ ತಂದು
ಬಂದು ಕರೆಯಲು ಸಂಭ್ರಮದಿಂದಲಿ ನಿಂದರು
ಹಯಗ್ರೀವ ಸಿಂಧುಸ್ಥಳದಿ ಅಶ್ವತ್ಥವೃಕ್ಷದಲಿಂದು ೨

ತಂದೇ [ತನ್ನದೇ] ರಥೋತ್ಸವವಿರುವೋದಂದು ನಾ
ಮಾಡುವೆನೆಂದು
ಅಂದಿನವರೆಗೂ ನಿಲ್ಲೆಂದು ಅಪ್ಪಣೆ ಮಾಡಿದನಿಂದು
ಬಂದು ಭಕುತರ ಸಂಭ್ರಮದಲಿ ಪಾಡುತ
ಧಿಂ ಧಿಂ ಧಿಮಿತೆಂದು ಅಂದದಿ ನಡೆಸಿದ ೩

ದೇಶ ದೇಶಾದ ಬಹು ಜನಾ ಸೇವಾ ಮಾಡುವ ಮನಾ
ಸಂತಾನ ಬೇಡುವರು ನಿನ್ನಾ ಪಾದೋದಕ ಪಾನಾ
ಸಪ್ತ ದಿನದ ಸೇವಾ ಸಾಧಿಸಿ ಭಜಕರ ನಾನಾ ಕಷ್ಟ ಬಡುತಲಿಹ
ಬಹುಜನಾ ಪಾದರಾಜ ಫಣಿಯಲ್ಲಿಟ್ಟವನಾ ಕಾಯ್ವೆನೆಂದು
ಬಿರುದು ಪೊತ್ತಿಹನಾ ೪

ದೀನಳಾದೇನ ಭಕ್ತರ ಬಂಧು ದಾನೀ ನೀನೆಂದು
ಧವಳಗಂಗೇಯಲಿ ಮಿಂದು
ಪಾವನ ಮಾಡೆಂದು ಪಾವಿನ ಸಲೆ ಸಹ ಸೇವಿಯ ಕೊಂಡೂ
ರಾಜೀವೇಶನೆ ನೀ ಬೇಗದಿ ಬಂದು ಋಣಭಾಜನ
ಕಡೆಹಾಯಿಸುಯೆಂದು ಸೋಜಿಗವೆಲ್ಲವು ನಿನಗದು ಒಂದು ೫

ಭಾವಿ ಭಾರತಿಪತಿ ನೀನೆಯೆಂದು ಬಾಗುವೆ ನಾನಿಂದು
ಜನ್ಮ ಜನ್ಮದಲಿ ನಿನ್ನ ಸ್ಮೃತಿ ಕೊಡುಯೆಂದು
ಕಾಡುವೆನೋ ಬಂದು
ದಾಶರಥಿ ವೇದವ್ಯಾಸತನಯ ಹೃದಯಾವಾಸ
ಪಂಚರೂಪ ನಿನ್ನಾ
ವಾಸದಿ ಕಂಡೆ ಹಯವದನದಾಸ ಮೇದಿನಿಯಲಿ ಬಂದು ೬

ಲಿಂಗಾಯತ ಗುರುವಿನ ಸದ್ದು ಅಡಗಿಸಿದ್ಯೋ ನಿ ಗೆದ್ದು
ಮುತ್ತಿನ ಗದ್ದಗಿ ಛತ್ತು, ವಾದಿಗಳ ಪಲ್ಮುರಿವುದು ಛತ್ತು
ಬಾಜಾಬಜಂತರಿ ಊದುವ ಗತ್ತು, ಸುರರಿಂಬಾಗಿ
ನೆರೆದಿರೋ ಜತ್ತು
ಪೂಮಳೆ ಕರಿವರು ನಮ್ಮ ಪ್ರೇಮಕೃಷ್ಣನ ಪೊತ್ತು ೭

(೫೬)

**ರಾಜರ ನೋಡಿರೈ ಇನತತಿ ತೇಜರ ಪಾಡಿರೈ** ಪ

ರಾಜಿಪ ಸಿರಿವರ ವಾಜಿವದನ ಪದ ಪೂಜಕರ
ಸುರಸನ್ನುತರ ಅ.ಪ

ತರುಣಾರುಣಸಮ ಚರಣಾಂಗುಲಿ ನಖರಗಳೋ
ವಜ್ರಕಲಶಗಳೋ
ವರಪಾರ್ಷ್ಣಿದ್ವಯ ಪರದಲಿ ಶೋಭಿಪ ಗುಲ್ಫಗಳೋ
ಮಾಣಿಕಯುಗಳೋ
ಕರಿವದನೋರ್ಧ್ವಗವರದಂತೋಪಮ ಜಂಘಗಳೋ
ಮೀನ್ಗಳ ಯುಗಳೋ
ಪರತಮ ಯತಿವರ ಗುರುರಾಯರ ಯುಗಜಾನುಗಳೋ
ಶಶಿ ಬಿಂಬಗಳೋ ೧

ಶಂಭು ಮುಖರ ಕದಂಬವಂದ್ಯನ ಊರುಗಳೋ
ಮೋಚಾ ವೃಕ್ಷಗಳೋ
ಕುಂಭೀಶ್ವರವರಕುಂಭೋಪಮ ಕಟಿತಟವೋ ಕೇಸರಿ ನಡವೋ
ಜೃಂಭಿತ ಉರು ಅರುಣಾಂಬರ ಶೋಭಿತ ರೂಪಾ
ಹಾಕಿದ ಕೈಪಾ
ತುಂಬಿದ ಕರುಣನ ಗುಂಭಸುನಾಭೀ ತಾವರೆಯೋ
ಗಂಗಾಸುಳಿಯೋ ೨

ಸುಂದರ ಕುಕ್ಷಿಸುಚಂದನ ಚರ್ಚಿತಹೃನ್ಮಂಡಲವೋ
ಹರಿ ಮಂದಿರವೋ
ಕುಂದದ ತುಳಸ್ಯ ಮಾಲಾವಳಿಯೋ ಗಂಗಾ ಹೊಳೆಯೋ
ಮಂದಜಾಕ್ಷಿ ಮಣಿಯಿಂದ ಶೋಭಿಪ ಕಂದರವೋ ಕಂಬುವರವೋ
ಚಂದಸುಗಾತ್ರನ ದ್ವಂದ್ವ ಬಾಹು ದಂಡಗಳೋ
ಕರಿಶುಂಡಗಳೋ ೩

ಯತಿಕುಲವರ್ಯನ ಸ್ಮಿತಯುತ ವಕ್ತ್ರವರ್ತುಲವೋ
ಅರಳಾಂಬುಜವೋ
ಅತಿಮಹಿಮನ ವರಸಿತಕರದಂತಾವಳಿಯೋ ಮಲ್ಲಿಗೆ ಮುಗಳೋ
ಕ್ಷಿತಿಸುರವಂದ್ಯನ ಅತಿ ಸುಂದರ ನಾಸಿಕವೋ ತಿಲಕಕುಸುಮವೋ
ಗತಿ ಶೂನ್ಯಗೆ ಸದ್ಗತಿದಾತನ ನಯನಗಳೋನ್ನೈದಿಲೆಯುಗಳೋ ೪

ಭೂತಾಧಿಪನಾ ಭಾತಕಪೋಲದ್ವಯವೋ ದರ್ಪಣಯುಗವೋ
ವೀತಕಾರ್ಮುಕ.....................................
ಪಾತಕಹರ ಹರಿಗಾಥವ ಕೇಳುವ ಕರ್ಣಗಳೋ ಸುಪರ್ಣಗಳೋ
ಪೀತ ತಿಲಕದಿಂ ಈ ಪರಿಶೋಭಿಪ ಫಣೆಯೋ
ಅಕ್ಷತೆ ಮಣೆಯೋ ೫

ಮಂದಿರವೆನಿಸುವ ವೃಂದಾವನ ಶುಭ ಪಂಚಕವೋ
ನಂದನ ವನವೋ
ವೃಂದಾರಕಘನ ವೃಂದದಿ ರಾಜಿಪ ಭೂಪಾ ಅಪ್ರತಿರೂಪಾ
ಮಂದ ಜನಕೆ ಸ್ವಾನಂದದನೆನಿಸಿದ ದಾತ ಜಗದೊಳುವಿಖ್ಯಾತ
ಇಂದಿರಾಧವನ ಚಂದದಿ ಒಲಿಸಿದನೀತ ಭಾವಿವಿಧಾತ ೬

ಸೃಷ್ಟಿಗೆ ಮೀರಿದ ಶ್ರೇಷ್ಠನ ಶುಭತಮ ಪಾದ ವಂದಿಸೆ ಮೋದ
ಎಷ್ಟೀತನ ಉತ್ಕೃಷ್ಟ ಪ್ರತಾಪದ ಕೊನೆಯ ಸುರರಜ್ಞೇಯ
ಘಟ್ಟೀತನ ಮನ ಮುಟ್ಟಿ ಭಜಿಸಲು ದುರಿತವ ತಡೆವ
ಕಾಮಿತ ಕೊಡುವ
ಶಿಷ್ಟರ ಸುಮನೋಭೀಷ್ಟದ **ಗುರುಜಗನ್ನಾಥವಿಠ್ಠಲ** ದೂತ ೭

ಮೋಚಾ-ಬಾಳೆ

(೫೭)

**ರಾಜರ ಭಾಗ್ಯವಿದು ಸ್ವಾದಿರಾಜರ ಭಾಗ್ಯವಿದು** ಪ

ಸೋಜಿಗವೆನಿಸಿ ವಿರಾಜಿಸುತಿದಕೊ ರಾಜರ ಭಾಗ್ಯವಿದು ಅ.ಪ

ಬುಧಜನಕೊಪ್ಪುವ ಪದಸುಳಾದಿ ಖಳ-
ರೆದೆಗಿಚ್ಚೆನಿಸುವ ಚತುರತೆಯಾ
ಸದಮಲ ನಾನಾವಿಧ ಗ್ರಂಥದಿ ಹಯ-
ವದನನ ಪೂಜೆಯು ಯಜಿಸುವುದೆಲ್ಲ ೧

ತಮ್ಮಯ ನೇಮವು ಒಮ್ಮಿಗು ಬಿಡದಂ-
ತಮ್ಮಯ ಬಿಡದಲೆ ಸಮ್ಮೊಗದಾ
ಅಮ್ಮಹಶಾಸಕ ಬೊಮ್ಮ ಭೂತವನು
ಘಮ್ಮನೆ ನಿರ್ಮಿಸಿ ರಮ್ಮಿಪುದೆಲ್ಲ ೨

ಮೇದಿನಿಯೊಳಗೆ ಶುಭೋದಯಕಾರಕ
ಸ್ವಾದೀಸ್ಥಳ ಸರ್ವಾಧಿಕವೈ
ಪಾದದ್ವಯದ ಈ ಅಗಾಧ ಮಹಿಮನೇ
ಶ್ರೀದವಿಠಲನಾರಾಧನೆಯೆಲ್ಲ ೩

(೫೮)

**ರಾಜವದನೆ ನೀ ಗುರು-**
ರಾಜರಿರುವ ಸಂಭ್ರಮ ನೋಡೆ ಪ

ರಾಜಿಸುವ ಮುಖನ
ಪೂಜಿಸುವ ಯತಿವರನೆ ಅ.ಪ.

ದೂಷಿಪ ದುರ್ಜನರ
ತಾಸು ಬಾಳದಂತೆ ವಿ-
ಶೇಷದಿಂದ ಭಜಿಸುವರ
ಪೋಷಿಸುವ ಯತಿವರನೇ ೧

ಪಾದ ನಂಬಿದವರಿಗೆ
ಮೋದವೀವ ದೇವನೆ
ಬೀದಿ ಬಿಡುವ ನಂಬದವರ (?)
ವಾದಿರಾಜ ಧೊರೆವರನೇ ೨

ಅಜಪದಕೆ ಅರ್ಹನೆಂದು
ಗಜವರದನ ದಾಸನೆಂದು
ಭಜನೆ ಮಾಡುವ ನಿಜವ ಪೇಳುವ
ವಿಜಯವಿಠಲನ ಸೇವಕರಿವರೇ ೩

(೫೯)

........................................ ಪ

**ಲಕ್ಷಾಭರಣದ ಭಾರತ**
ದಕ್ಷತೆಯಿಂ ಬರೆದು ಯುಕ್ತಿಮಲ್ಲಿಗೆ ಬರೆದೈ
ಲಕ್ಷಣ ಕೃತಿಗಳ ರಚಿಸಿದ
ಭಿಕ್ಷುಕ ಮಣಿ ವಾದಿರಾಜ ಕವಿಕುಲತಿಲಕಾ ೧

ವರಕಾವ್ಯ ಮಾಘವೆಂದೊಡೆ
ಗುರುವರ ಶ್ರೀರುಕ್ಮಿಣೀಶ ರಚಿಸಲ್
ಧರಣೀಶ ಮೆಚ್ಚಿ ನಿನ್ನಂ
ಕರಿಮೇಲ್ ಮೆರೆಸಿದ ಸಮಸ್ತ ಬುಧರಾದರಿಸಲ್ ೨

ವರಬುದ್ಧ ವಿಠಲನಾದನು
ಗುರುತರಮಾತಂಕದ ಗುಟ್ಟು ಬಯಲಾಯ್ತುಹಹಾ
ಸರಿಯಾರು ತಮಗೆ ಜಗದೋಳ್
ಪರಿಪರಿ ಮಹಿಮೆಗಳ ತೋರ್ದ ಧೀರ ಮಹಾತ್ಮ ೩

ಪಾವನೆಯು ಧವಳಗಂಗೆ ತ-
ಪೋವನ ನಿರ್ಮಲ ಪ್ರಶಾಂತ ಚಿತ್ತವ ನೀಡಲ್
ಕೋವಿದರು ಸ್ವಾದಿ ಕ್ಷೇತ್ರದಿ
ಸೇವಿಪರ್ಮೈ ಸತತ ನಿನ್ನ ಶ್ರೀ ಗುರುರಾಜಾ ೪

ಹಯವದನರೂಪಿ ಶ್ರೀಹರಿ
ನಿಯಮದಿ ಭವದರ್ಪಿತ ಹಯಗ್ರೀವವ ಮುದದಿಂ
ದಯದೋರಿ ಬಂದು ಭುಜಿಸಿದ
ಜಯ ಜಯ ಶ್ರೀವಾದಿರಾಜ ಜೈ ಗುರುರಾಜಾ ೫

ವರಶಿಷ್ಯ ಭೂತರಾಜನ
ನಿರುಪಮ ಸಾಹಸದ ದೀಕ್ಷೆ ದಕ್ಷತೆ ಮೆರೆಯಲ್

ವರಬದರಿಯಿಂದಲಾಕ್ಷಣ
ತರಿಸಿ ತ್ರಿವಿಕ್ರಮ ಪ್ರತಿಷ್ಠೆಗೈದ ಮುನೀಂದ್ರಾ ೬

ಗುರುವರ ಜಗದೊಳಗಾಯುಃ
ಪರಿಮಿತಿ ಎರಡ್ಡತ್ತುವರ್ಷ ಮೇಲ್ ಮೆರೆದು ಶ್ರೀ–
ಕರ ವೃಂದಾವನದೊಳ್ ಬಲ್
ವರವೀಯುವ ಪ್ರಭುವೆ ಕಾಯೌ ಭಾವಿಸಮೀರಾ ೭

ಜಯ ಮಧ್ವಶಾಸ್ತ್ರನಿಪುಣಾ
ಜಯ ಜಯ ದುರ್ವಾದಿ ಸರ್ವಶಮನಾ ದಮನಾ
ಜಯ ಜಯ ಶ್ರೀ ಗುರುರಾಜಾ
ಜಯ ಜಯ ಸ್ವಾದೀನಿವಾಸ ಜಯ ಹರಿದಾಸಾ ೮

– ಭೀಮಕವಿ
ಟಿಪ್ಪಣಿ : ಈ ಹಾಡಿನ ಪಲ್ಲವಿ ದೊರೆತಿಲ್ಲ

(೬೦)

ಲಾತವ್ಯ – ಲಾತವ್ಯ ಖ್ಯಾತಾಗ್ರೇಸರ । ಭೂತರಾಜನುತ ಪ

ಸ್ವಪ್ನದ್ರಷ್ಟ್ರುವು । ವಿಪ್ರನ ಮುಖದಿಂ
ಸ್ವಾಪ್ನಾಖ್ಯಾನವ । ಸುಪ್ರಕಟಿಸಿದೆ ೧

ವ್ಯಾಸರ ಸಮ್ಮುಖ । ವಾಸಿಸುತಿಹ ಸುವಿ
ಶೇಷ ಮಹಿಮ ಗುರು । ದೈಶಿಕರೊಡೆಯನೆ ೨

ಆಖಂಡಲ ಮುಖ । ಮಂಡಿತ ಚರಣನೆ
ಪಾಖಂಡರ ಮತ । ಖಂಡಿಸಿ ಮೆರೆದಾ ೩

ಭಯವಿದೂರ ತವ । ದಯವನು ಪ್ರಾರ್ಥಿಪೆ
ಹಯವದನನ ಪದ ಪ್ರಿಯ ಭಜಕಾಗ್ರಣಿ ೪

ಭಾವಜ ಪಿತ **ಗುರುಗೋವಿಂದವಿಠಲನ**
ಭಾವದಿ ಕಾಣಿಸು । ಭಾವಿ ಮರುತ ಗುರು ೫

(೬೧)

**ವಂದಿಪೆ ಚರಣಾರವಿಂದಕೆ ಸದ್ಗುರು ವಾದಿರಾಜ** ಪ

ಮಂದಮತಿಯ ಬಿಡಿಸಿಂದಿರೇಶನ ತೋರೊ ವಾದಿರಾಜ ಅ.ಪ

ದುರುಳ ಬುದ್ಧಿಯಿಂದ ಮರೆದು ಬಿಟ್ಟು ನಿನ್ನ ವಾದಿರಾಜ
ಧರಣಿ ಮಂಡಲದೊಳು ಪಾಪಿಷ್ಠನಾದೆ ವಾದಿರಾಜ
ಪರಮ ಪುರುಷ ಭಾವಿ ಮರುತ ನೀನೈತಂದು ವಾದಿರಾಜ
ಹಿರಿಯರ ಮುಖದಿಂದ ನಿಶ್ಚಯಿಸಿದೆ ವಾದಿರಾಜ ೧

ಶಿರದೊಳು ಹೂರಣದ್ಧರಿವಾಣ ಧರಿಸುತ ವಾದಿರಾಜ
ವರಭಕ್ತಿಯಿಂದಲಿ ತುರಗಾಶ್ವಗುಣಿಸಿದ ವಾದಿರಾಜ
ಗುರು ಜಗನ್ನಾಥದಾಸರ ಸ್ವಪ್ನದೊಳು ಬಂದ ವಾದಿರಾಜ
ಹರಿಕಥಾಮೃತಸಾರ ವಿರಚಿಸಿರೆಂದರುಹಿದ ವಾದಿರಾಜ ೨

ಶ್ರೀಮಧ್ವಾರ್ಯಮತ ಸಾಮ್ರಾಜ್ಯ ಧ್ವಜವೆತ್ತಿ ವಾದಿರಾಜ
ವ್ಯೋಮಕ್ಕೆ ಹಾರಿಸೀ ಭೂಮಿಯೊಳು ಮೆರೆಸಿದ ವಾದಿರಾಜ
**ಶ್ಯಾಮಸುಂದರಕೃಷ್ಣ** ನಾಮದ ಮಹಿಮೆಯ ವಾದಿರಾಜ
ಪಾಮರರಿಗೆ ಪೇಳೆ ಪ್ರೇಮದಿ ಸಲುಹಿದ ವಾದಿರಾಜ ೩

(೬೨)

**ವಂದಿಸುವೆನು ವಾದಿರಾಜನೆ** ಪ

ಸದಾ ನಿನ್ನಯ ಪದಪಂಕಜವ ಅ.ಪ

ಶ್ರೀನಿವಾಸನಾ ಮನಮುಟ್ಟಿ ನಾ
ಗಾನಮಾಡುವ ಜ್ಞಾನವೀವುದು ೧

ಕೋಮಲಾಂಗನೇ ಕಾಮಭಂಗನೇ
ಕಾಮಿತಾರ್ಥದ ಕಾಮಧೇನುವೇ ೨

ಘನ್ನಲಕ್ಷ್ಮೀಶ ವೇಂಕಟವಿಠಲನ
ದಾಸನೇಯೆನ್ನ ಪಾಲಿಸು ೩

(೬೩)

ವಾಜೀವದನಪದ ರಾಜೀವಭ್ರಮರ
ನೀ ಜಯ ಕೊಡು ವಾದಿರಾಜ ಗುರುವರಾ ಪ

ವಾಗೀಶಕುವರ ಸರ್ವಾಗಮನಿಕರ
ಯೋಗಾದಿ ತಿಳಿದು ಮಧ್ವಾಗಮ ಚತುರಾ ೧

ಸ್ಫೂರ್ತಿಯ ಕೊಟ್ಟು ಇಷ್ಟಾರ್ಥವ ಸಲಿಸೇ
ತೀರ್ಥಕ್ಷೇತ್ರಂಗಳ ಕೀರ್ತಿಯ ಮೆರೆಸಿದ ೨

ಅತ್ಯಾದರದಿ ಕೈ ಎತ್ತಿ ನೈವೇದ್ಯವ
ನಿತ್ಯ ಹಯಾಸ್ಯಗೆ ಪ್ರತ್ಯಕ್ಷ ಉಣಿಸುವ ೩

ದೇಶದೇಶದಿ ಹರಿ ದಾಸ್ಯಾರ್ಕಪ್ರಭೆಯ
ಸೂಸಿ ದುರ್ಮತ ತಮ ನಾಶನ ಮಾಡಿದ ೪

ಪಟುತರ ಮಹಿಮ ಶ್ರೀ ತಂದೆವೆಂಕಟೇಶ
ವಿಠ್ಠಲಧ್ಯಾನದೊಳಿಡೋ ಸ್ವಾದಿಪುರೀಶಾ ೫

(೬೪)

ವಾಜಿವದನಾರ್ಚಕ ಶ್ರೀ ವಾದಿರಾಜಾ ಪ

ವಾದಿ ಮಸ್ತಕಶೂಲ ಮಧುರಗುಣ ಶೀಲಾ ಅ.ಪ.

ವಾಗೀಶಮುನಿ ಕಂಜ ಸಂಭವನೆ ಯನ್ನ
ಹೃದಯಾಕಾಶದೊಳಗಿರುವ ವಾದಿಸಂಭವನೇ
ವಾದದಿಂದಲಿ ಗೆದ್ದು ಹೊರದೂಡದಿರೆ ಯನಗೆ
ಗತಿದಾರು ಪೇಳಯ್ಯಾ ಪರಮ ಕರುಣೀ ೧

ಪರಮ ಕರುಣಾಬ್ಧಿಚಂದಿರನೆಂದು ಭೂಸುರರು
ಪ್ರಾರ್ಥಿಸಿದ ಉಕ್ತಿಯನೆ ನೆರೆನಂಬಿ ನಾನು
ಪರಕೆ ಸಾಧನಮಾಳ್ಪ ಬಗೆಯನರುಹುತ ಯನ್ನ
ಸತತ ಪೊರೆಯೆಂದು ನಾ ಮೊರೆ ಪೊಕ್ಕೆನಯ್ಯ ೨

ಕಡೆಯ ನೀ ಕಲ್ಯಾದಿ ದೈತ್ಯರುಪಟಳವನ್ನೆ
ತಡಮಾಡುವ ಮನವ ನೀ ಮಾಡೆಯನ್ನ
ತನು ಮನದ ಯಾವದೋ ಬೇರೆ ಬಗೆಯಿಂದಲಿ
ನಿನ್ನ ಪಾದಕರ್ಪಿಸುವದೇ ಸತ್ಯ ಸತ್ಯ ೩

ನಿನ್ನ ಪಾದಕೆ ಪೊಂದಿದವನಾದರೇ ಸಲಹೊ
ಅನ್ಯನಾದಡೆ ತಿಳುಹು ದಯದಿ ಸರ್ವಜ್ಞ
ಮುನಿವರನೆ ನೀ ಕಾಮಧೇನು ಕಲ್ಪತರುವು
ಚಿಂತಾಮಣಿ ಎಂದು ಭಕ್ತರ್ಹೊಗಳುವರಯ್ಯ ೪

ನಿನ್ನ ದ್ರೋಹಿಗಳ ಸಹವಾಸವೆನಗೀಯದಿರು
ನಿನ್ನವರ ದ್ರೋಹ ಎಂದೆಂದಿಗೂ ಬೇಡ
ನಿನ್ನೊಡೆಯನಾ ಪಾದ ನಿನ್ನ ಪ್ರಿಯನ ದ್ವಾರಾ
ನೀ ಮೆಚ್ಚುವಂತೆ ಈ ಜೀವನಕೆ ತೋರಯ್ಯ ೫

ಅಜ್ಞಾನ ತಿಮಿರದಲಿ ಮುಳುಗಿ ನಾನನವರತ
ಸುಜ್ಞಾನಿಗಳ ಮಹಿಮೆ ತಿಳಿಯದಾದೆ
ಪ್ರಾಜ್ಞಮೂರ್ತಿಯ ಪಾದ ಪದ್ಮ ಮಧುಪನೆ ಯೆನ್ನ-
ಜ್ಞಾನದಲಿ ಪರಹಿತನೆ ನೀನಿದ್ದು ಸಲಹಯ್ಯ ೬

ಶರಣಾಗತರ ವಾಲಿ ಶರಗೊಡ್ಡಿ ಬೇಡುವೆನೊ
ಕರುಣದಿಂದಲಿ ಕಾಯೋ ಕರುಣ ಗುರುವೆ
ಶರಣು ಶರಣು ಸಜ್ಜನರ ಕವಿಗೇಯ
ಕಿರಿ ಗುರುತಂದೆವರದಗೋಪಾಲವಿಠ್ಠಲನ ಪ್ರೀಯಾ ೭

(೬೫)

ವಾಜಿವದನಾರ್ಚಕ ಶ್ರೀವಾದಿರಾಜ ಪ
ರಾಜೀವನಯನ ಶ್ರೀಕೃಷ್ಣನಲಿ ಬಿಡು ಎನ್ನ ಅ.ಪ

ದೇವದೇವೇಶನಾ ಪರಮ ಒಲುಮೆಗೆ ಪಾತ್ರ
ಪಾವನ್ನತಮ ಚರಿಯ ಪತಿತ ಪಾಲ
ಸಾವಧಾನದಿ ಎನ್ನ ಆದಿರೋಗವನಳಿದು
ಕೇವಲ ಸದ್ಭಕ್ತಿ ಶೀಲನ ಮಾಡಯ್ಯ ೧

ಭಾರತೀಪತಿಪದವನ್ನೈದುವ ಮಹಾತ್ಮಾ
ಮಾರಾರಿಸುರಪೂಜ್ಯ ಕರುಣಿಸಿ ಕಾಯೋ
ಸಾರಿದೆನು ತವಚರಣಸರಸಿಜಯುಗ್ಮಗಳ
ದೂರ ಮಾಡದೆ ಹರಿದು ಕರುಣ ಪಾತ್ರನ ಮಾಡು ೨

ಪರಮ ಭಾಗವತ ಶಿರೋರತುನರಿಂದರ್ಚಿತನ
ಕಿರಿ ವೇಣುಗೋಪಾಲ ವೇದವೇದ್ಯ
ಜಯೇಶವಿಠ್ಠಲನ ಮನದಲ್ಲಿ ಬಿಡದಿಪ್ಪ
ಪರಮ ಕೃಪೆ ಬೇಡುವೆನು ಕರುಣಾಬ್ಧಿ ಕೃಪೆ ಮಾಡು ೩

(೬೬)

ವಾದಿಗಳೆದೆಶೂಲಾ । ಗುರುವೆ । ವಾದಿರಾಜ ಶೀಲಾ ಪ

ಬೋಧಿಸಿ ದಶಮತಿ । ಬೋಧರ ಶಾಸ್ತ್ರವ
ಐದಿಸು ಸದ್ಗತಿ । ಯಾದವೇಶನ ಪ್ರೀತಿ ಅ.ಪ

ಸೋದೆ ಪುರದಲಿರುವಾ । ವೃಂದಾವನ
ಮೋದದಿ ದರ್ಶಿಸುವಾ ॥
ಸಾಧುಗಳಘನೀಗಿ । ವೇದವಿನುತ ಹರಿ
ಪಾದಪ ತೋರಿಸಿ । ಮೋದವ ಕೊಡಿಸುವ ೧

ಧವಳಾಭಿದ ಗಂಗಾ । ಅಲ್ಲಿಹುದು
ಭವಿಸಿರ್ಪುದುತುಂಗಾ ॥
ಸ್ತವನ ಮೂರಲಿ ಸ್ನಾನ ಕವಿದಿಹ ಅಜ್ಞಾನ
ಸ್ರವಿಸಿ ಶ್ರೀಹರಿ ಜ್ಞಾನ । ಪ್ರವಹವ ಸೃಜಿಸುವುದು ೨

ಪಂಚ ವೃಂದಾವನದೀ । ಇಹ ಹರಿ
ಪಂಚ ಸುರೂಪದಲೀ ॥
ಅಂಚೆಗಮನ ಹರಿ । ಮಂಚಯೋಗ್ಯ ಮುಖ
ಪಂಚವಿಂಶತಿ ಸುರ । ವಾಂಛಿತ ಪಡೆವರು ೩

ವಾಗೀಶ ಕರಜಾತಾ । ಸೇವಿತ
ನಾರಾಯಣ ಭೂತ ॥
ಭೋಗಿಪುರೀಶನ । ರೋಗವ ಹರಿಸಿದೆ
ಆಗಮಜ್ಞ ಗುರು । ನಾಗಶಯನ ಪ್ರಿಯ ೪

ಬದರಿಯೊಳಿದ್ದವನಾ । ತರಿಸಿದಿ
ವಿಧಿನುತ ತ್ರಿವಿಕ್ರಮನಾ ॥
ಮುದದಿ ನಿಲ್ಲಿಸುತ । ವಿಧವಿಧ ವೈಭವ
ವಿಧಿಸೆ ನಿನ್ನಯ ಜನ । ಒದಗಿ ಚರಿಸುವರು ೫

ವಿಜಯ ಸಖನ ಪಾದಾ । ನಿರುತ
ಭಜಿಸಿ ಪಡೆವೆ ಮೋದ ॥
ಸುಜನ ಸುರದ್ರುಮ । ಭಜಿಸೆ ಹರಿಸಿ ಭ್ರಮ
ಅಜ ಜನಕನ ತೋರ್ವೆ ॥ ಋಜು ಲಾತವ್ಯರೆ ೬

ಪ್ರಾಕೃತ ಪದಪದ್ಯಾ । ರಚಿಸುತ
ಅ–ಪ್ರಾಕೃತ ನಿರವದ್ಯಾ ॥
ಅ–ವ್ಯಾಕೃತ **ಗುರುಗೋವಿಂದವಿಠ್ಠಲ**
ಸ್ವೀಕೃತ ನಿಜ ಭಕ್ತ । ಪ್ರಾಕೃತ ಕಳೆವಂಥ ೭

(೬೭)

**ವಾದಿಗಳೆಲ್ಲರನೇ ಗೆದ್ದ ವಾದಧೀರನೇ** ಪ

ವಾದಿರಾಜ ಗುರುರಾಯ ಸಾಧುಪ್ರಿಯಗೇಯಕಾಯ ಅ.ಪ.

ಮುಂದುವರಿದು ಬಂದ ವಾದಿಯ ವೃಂದವ
ಒಂದು ಮಾತಿನಿಂದಲವರ ಮಂದಗೆಡಿಸಿ
ಕಂದಿಸಿ ಕುಂದಿಸಿ ನಂದಿ ನಲಿವ ೧

ಮತ್ತರಾದ ಜನರ್ಗಳೆಲ್ಲ ಸುತ್ತ ಮುತ್ತ ನೋಡುತಿರಲು
ಮತ್ತೆ ಅವರ ನೆತ್ತಿಯ ತೊಣೆದು
ಹತ್ತಿದೆ ಮುತ್ತಿನ ಗದ್ದಿಗೆಯನ್ನು ೨

ನಿನಗೆ ಯೆಣೆಗಾಣೆ ನವ ದಿನಪ ತೇಜ ಮಧ್ವ ಮುನಿಯ
ಮನದೊಡೆಯ ಶ್ರೀ **ಮುದ್ದುಕೃಷ್ಣನ**
ನೆನೆದ ತನುವನಲ್ಲವೇ ೩

(೬೮)

**ವಾದಿರಾಜ ಅಸ್ಮದ್ಗುರು ವಾದಿರಾಜ** ಪ

ವಾದಿರಾಜ ತವ ಪಾದಕಮಲಭಿ–
ವಾದನ ಮಾಳ್ಪೆ ಸನ್ಮೋದವನೀಯೋ ೧

ಸಾರಿದರಿಗೆ ಕಲ್ಪಭೂರುಹವಂತೆ ಮ–
ನೋರಥ ಸಲ್ಲಿಸು ಸೂರಿಗಳರಸೇ ೨

ಭೇದ ಪಂಚಕವನು ಸಾಧಿಸಿ ಕುಮತ ಕು-
ವಾದಿ ಗರ್ವತಿ ಭೇದನಗೈದೆ ೩

ದೇಶಿಕವರ್ಯ ವಾಗೀಶಕುವರನೇ
ಕ್ಲೇಶ ಹರಿಸೊ ಅಘನಾಶನ ಗೈದು ೪

ನಿಗಮಾನುತ ಸಿರಿ ಜಗನ್ನಾಥವಿಠಲನ
ಸುಗುಣಗಳನುದಿನ ಪೊಗಳಿ ಹಿಗ್ಗುವ ೫

(೬೯)

**ವಾದಿರಾಜ ಗುರು ಮಾನತೋಸ್ಮಿ ಸತತಂ ।**
ಕಲ್ಯಾದಿ ದೈತ್ಯ ನಿವಾರಣ ನಿಪುಣಂ ಪ

ಪಂಚವೃಂದಾವನ ಮಂದಿರ ಭವ್ಯಂ
ಪಂಚ ಸುಪರ್ವಾದಿ ಬುಧ ಜನ ಸೇವ್ಯಂ
ಅಂಚೆಗಮನ ಪದಯೋಗ್ಯ ಸುಭಾವ್ಯಂ
ಸಂಚಿಂತಿಪರ ಭವಾರ್ಣವ ತರಣಂ ೧

ಹಯಮುಖ ನಿಸ್ಸೃತ ಶ್ರುತಿ ಸತ್ರವಣಂ
ಹಯಮುಖ ಪದ ಸದ್ವನಜ ಸುದಾಸಂ ।
ಹಯಮುಖ ಪ್ರೀತ್ಯೈ ವಿರಚಿತ ಶಾಸ್ತ್ರಂ
ತ್ರಯಿ ಮುಯಿ ರಸ ಸ್ವಪ್ನಾಖ್ಯಾನಂ ೨

**ಗುರುಗೋವಿಂದವಿಠ್ಠಲ** ವರ ಭಕ್ತೇಶಂ
ಸುರ ಮುಖ ದ್ವಿಜವರ ಸರ್ವ ಸುಸೇವ್ಯಂ ।

ಪರಮತ ಮದಕರಿ ಪಂಚ ಸುವಕ್ತ್ರಂ
ಪರಿಪಾಲಯ ಮಾಂ ತವ ಭಕ್ತಋಗಂ
೩

ಸೂಚನೆ : ಈ ಕೀರ್ತನೆಯು ಸಂಸ್ಕೃತದಲ್ಲಿ ಇದ್ದರೂ 'ಅಣುಗಂ' ಎಂಬ ಒಂದೇ ಒಂದು ಕನ್ನಡ ಶಬ್ದವು ಗುರುಗೋವಿಂದವಿಠಲರ ಕಣ್ಣು ತಪ್ಪಿ ಸೇರಿದೆ!

(೭೦)

ವಾದಿರಾಜ ಕರುಣೋದಧಿ ನಿಮ್ಮಯ
ಪಾದ ನಂಬಿದವನಾದರಿಸುವುದು ಪ

ಶ್ರೀಶನ ಪರಮಾದೇಶದಿ ಕ್ಷಿತಿಯೊಳು
ದೈಶಿಕ ಹಯಮುಖ ದಾಸನೆನಿಸಿದೆ ೧

ತಾರೇಶನವೋಲ್ ಧಾರುಣಿ ಸುರರಿಂದ
ಆರಾಧಿತರಾಗಿ ಧೀರರೆನಿಸಿದ ಸೂರಿಜನಾಪ್ತಾ ೨

ಗುರುವಾಗೀಶರ ಕರಕಮಲೋದ್ಭವ
ದುರುಳನ ಜಯಿಸಿದೆ ಗುರುಕುಲತಿಲಕ ೩

ಧಾತ್ರಿಪಾಲಕನ ಪುತ್ರಿ ಬರೆದ ಶುಭ
ಪತ್ರವ ಲಕುಮಿ ಕಳತ್ರನಿಗಿತ್ತೆ ೪

ಸಾಮಗಾನ ರತನಾ ಮ್ಯಾಳದಿ
ಸ್ವಾಮಿಗಳೊಳಗುದ್ದಾಮನೆನಿಸಿದೆ ೫

ಶರಧಿಗೆ ಪೋಗಲು ಮರುತನಿಂದ ಉ-
ಚ್ಚರಿಸೆ ಗೋಪ್ಯವನು ತೋರಿದೆ ಮುದದಿ ೬

ಮಧ್ಯಾರಣ್ಯದಿ ರುದ್ರಾಂಶನ ಗೆಲಿ-
ದುದ್ಧರಿಸಿದೆ ಶುಭ ಸದ್ಗುಣ ಸಾಂದ್ರ ೭

ವ್ಯಾಲನ ಭಯವನು ತಾಳದೆ ಬಂದ ಕೃ-
ಪಾಳು ಮೂಷಕನ ಪಾಲನ ಗೈದೆ ೮

ಸುಂದರ ತೀರ್ಥಪ್ರಬಂಧಾದಿಗಳಾ-
ನಂದದಿ ರಚಿಸಿ ಮುಕುಂದನಿಗಿತ್ತೆ ೯

ಕ್ರೂರ ಕಾಲಭೈರವನ ಭಯಪ್ರದ
ಮಾರಮುಖರ ಸಂಹಾರವ ಗೈದೆ ೧೦

ವ್ಯಾಪಿಸಿಕೊಂಡಿಹ ಶ್ರೀಪತಿವಿಠಲ
ಪರನೆಂದತಿ ವ್ಯಾಪಿಸಿ ಮೆರೆದೆ ೧೧

(೭೧)

**ಅವತರಿಸಿದ ರಾಜ ಋಜುಗಣ ಮಹರಾಜ** ಪ

ಅವತರಿಸಿದ ಲಾತವ್ಯ ದೇವನುರೆ
ಪವನಮತಾಂಬುಧಿ ಚಂದ್ರಮನು ಖರೆ ಅ.ಪ

ದುಷ್ಟರಾದ ದುರ್ವಾದಿಗಳನು ಎದೆ
ಮೆಟ್ಟುತ ದುಃಶಾಸ್ತ್ರವ ಖಂಡಿಸಿ ಹುಡಿ
ಗುಟ್ಟುತ ವಾಗ್ಬಾಣದಿ ಸುಜನರ ಮನ-
ದಿಷ್ಟ ಸಲಿಸಿ ಶ್ರುತಿಸಮ್ಮತವೆನಿಸಿಹ
ಶ್ರೇಷ್ಠವಾದ ಮಾರುತ ಮತ ತೆಕ್ಕೆಯ
ನೆಟ್ಟು ಕುಸಿಯದಂದದಿ ದೃಢಪಡಿಸುತ
ಶಿಷ್ಟ ಸಂಪ್ರದಾಯವ ಪರಿಪಾಲಿಸಿ
ಸ್ಪಷ್ಟಪಡಿಸಿ ಶುಚಿ ಸಿದ್ಧಾಂತವ ತಿಳಿ-
ಗೊಟ್ಟು ಲಲಿತವಹ ಪ್ರಾಕೃತದೊಳು ಮನ
ಮುಟ್ಟಿ ನೋಡೆ ಕೈಗನ್ನಡಿಯಂದದಿ
ದೃಷ್ಟಿಪಥಕೆ ತೋರುವವೋಲ್ ಗೈಯುತ
ಸೃಷ್ಟಿಕರ್ತ ಪರಮೇಷ್ಠಿ ಜನಕ ಸಿರಿ-
**ಕೃಷ್ಣನ** ಪದ ಮನಮುಟ್ಟಿ ಸೇವಿಸಲು ೧

---

ಟಿಪ್ಪಣಿ : ಇದು ಒಂದು ಸುಳಾದಿಯ ಭಾಗ. ಪೂರ್ಣ ಸುಳಾದಿ ದೊರೆತಿಲ್ಲ.

(೭೨)

ವಾದಿರಾಜ ಗುರು ನೀ ಕೈಯಬಿಟ್ಟರಿನ್ಯಾರೆನ್ನ
ಸಲಹುವರೀಜಗದೀ
ಬಾಧಿಪ ರಿಪುಗಳ ದೂರ ಓಡಿಸಿ ನಿನ್ನ ಪಾದ
ಸೇವೆಯೊಳಿಟ್ಟು ಸಲಹೊ ಸತತ ನಮಿಪೆ ಪ

ಶ್ವಾಸ ಪ್ರೇರಕ ನೀನಹುದಾದ ಕಾರಣ ವಿ-
ಶ್ವಾಸ ಪುಟ್ಟಿತು ನಿನ್ನ ಪಾದದಲ್ಲಿ
ಘಾಸಿ ಬಡಿಸಬ್ಯಾಡ ಪರಾಧೀನ ನಾನಹುದಯ್ಯ
ಸಾಸಿರ ನಮಸ್ಕರಿಸಿ ಬೇಡಿಕೊಂಬೆ ೧

ಕಂದನ ತಪ್ಪು ತಂದೆಣಿಸಿ ದಣಿಸಿದರ
ಮುಂದೆನಗಾರೆಲೊ ಮುನಿವರನೆ
ತಂದೆ ನೀ ಎನಗೆಂದು ಸಂದೇಹವಿಲ್ಲದೆ
ಮಂದಿಯೊಳಗೆ ನುಡಿಸಿ ಮನಸಿಗೆ ತರಲೊಲ್ಲಿ ೨

ಬಂಧನ ನಿವೃತ್ತಿಯೆಂದಿಗೆ ಪೇಳಯ್ಯ
ವೃಂದಾವನವಾಸಿ ವಾದಿರಾಜ
ಬಂಧು ಬಳಗದೊಳು ಬೆಂಡಾದೆ ಸಾಕಿನ್ನು
**ಕೃಷ್ಣವಿಠಲ** ಶ್ರೀನಿವಾಸನ ಹೊಂದಿಸೊ ಸಹಜ ೩

(೭೩)

ವಾದಿರಾಜ ಗುರು ನೀ ದಯಮಾಡದೆ
ಈ ದುರಿತವ ಕಳೆದಾದರಿಪರ್ಯಾರು ಪ

ಮೋದಮುನಿಮತ ಪಯೋದಧಿ ಪೂರ್ಣ
ವಿದೋದಯ ಶರಣರ ಕಾದುಕೊ ದೊರೆಯೇ ೧

ನೀ ಗತಿಯೆಂದನುರಾಗದಿ ನಂಬಿದ
ಭೋಗಪುರೀಶನ ರೋಗವ ಕಳೆದೆ ೨

ಭೂಮಿಪರುಪಟಳಕಾ ಮಹಿನಾಥನು
ತಾ ಮೈಮರೆದಿರೆ ನೀ ಮುದದಿತ್ತೆ ೩

ದೇಶಿಕಾರ್ಯ ವಾಗೀಶಕುವರ ತವ
ದಾಸಸಮೂಹವ ನೀ ಸಲಹೊ ಸದಾ ೪

ಕಲಿಬಾಧೆಯು ವೆಗ್ಗಳವಾಗಿದೆ ಈ
ಇಳೆಯೊಳು ಯತಿಕುಲತಿಲಕ ಕೃಪಾಳೊ ೫

ಜನ್ಮಾಧಿವ್ಯಾಧ್ಯುನ್ಮಾದ ಭ್ರಮ
ನಿಮ್ಮೊರೆಹೊಕ್ಕವಗನ್ಮೊದಲುಂಟೆ ೬

ನಿನ್ನವಶನಾದ ಜಗನ್ನಾಥವಿಠಲನ
ಉನ್ನಹದಲ್ಲಿ ತೋರೆನ್ನ ಮನದಲಿ ೭

(೭೪)

ವಾದಿರಾಜ ಗುರು ದಯಮಾಡೊ ಎನ್ನಾ ಪಾದಾನತನನ್ನ ಪ

ವಾದಿ ಸಂಘವನು ಭೇದಿಸಿದ್ಯೊ ಘನ್ನಾ ಹಯವದನೆನ್ನ
ಮೋದದಿಂದ ಹೃದಿ ನೋಡಿದೆಯೊ ರನ್ನಾ
ಸಾಧು ಸಂಗವನ್ನು ಪರಿಪಾಲಿಸಿನ್ನಾ ಋಜಗುಣಮೋಹನ್ನ ೧

ಕೃಷ್ಣದರ್ಶನಕೆ ತುಷ್ಟಿಸಿ ನೀ ಬಂದು ಮಾರ್ಗದಲಿ ನಿಂದು
ದುಷ್ಟ ದೈತ್ಯನುವಾದಕ ಬರಲಿಂದು
ಇಟ್ಟಿಯೊ ಆನಂದಭಟ್ಟರಲ್ಲಿ ಭಾರರಸ ಕರುಣಾಪೂರ ೨

ಶ್ರೇಷ್ಠ ನಿನ್ನಯ ದೃಷ್ಟಿಯ ರಸದಿಂದಾ
ವಾದಿಯ ಕರದಿಂದಾ
ಕೊಟ್ಟ ಪತ್ರವನು ತಿರುಗಿಸಲಾನಂದಭಟ್ಟರಿಗೆ ನೀ
ಕೊಟ್ಟಿಯೊ ಪರಿರಂಭಾ ಮಾಡದಲೆ ವಿಲಂಬ ೩

ನೀಡಿದ ಪತ್ರವ ನೋಡುತ ಬಹು ಚರಿತಾ ಆನಂದವ
ಬಡುತಾ ಬೇಡಿರಿ ವರಗಳ ನೀಡುವೆ ನಾನೆನುತಾ
ನೀಡಿದ್ಯೊ ಮಮ ಸಮಗಾಡನೆ ಸುತ ಗೀತಾ
ನಿಮಗಾಗಲೆನುತಾ ೪

ತಂದೆ ನಿನ್ನ ದಯದಿಂದಲಿ ವಂಶಾ ಬೆಳದಿತೊ ಸುಯಶಾ
ಇಂದು ನೋಡೊ ಹತಬಂಧನ ಭವಪಾಶಾ
ಕಂದ ನಾನು ನಿನಗಿಂದಿರೇಶನ ದಾಸಾ
ಋಜುಗಣದೊಳಗೀಶಾ ೫

---

ಟಿಪ್ಪಣಿ: 'ಇಂದಿರೇಶ' ಮುದ್ರಿಕೆಯ ಪಾಂಡುರಂಗಿ ಹುಚ್ಚಾಚಾರ್ಯ ಆನಂದಭಟ್ಟರ ವಂಶಜರೇ ಆಗಿದ್ದಾರೆ.

(೭೫)

**ವಾದಿರಾಜ ಗುರು ನಿಮ್ಮಡಿಗೆರಗುವೆ**
ಸಾದರದಿಂದಲಿ ಮಂದನ ಕೈಪಿಡಿಯೋ ಪ

ಸಾಧುಜನಾಶ್ರಯ ಮೇದಿನೀಸುರತರು
ಪಾದವ ಪಿಡಿದಿಹೆ ಬೋಧಿಸು ವಿಜ್ಞಾನ ಅ.ಪ.

ಕಾದಿಡೆ ಸುಜನಕೆ ಮಧ್ವಾಗಮನಿಧಿ
ಸಾದರದುದಿಸಿದಿ ಬುಧಜನಕುಲಮೌಳಿ
ಬೂದಿಯ ಮಾಡುತ ದುರ್ಮತಜಾಲವ
ಮಾಧವ ಮಧ್ವರ ಸೇವೆಯ ಸಲ್ಲಿಸಿದೇ ೧

ಕವಿತಾವನಿತೆಯ ಕುಣಿಸುತ ಶಾಸ್ತ್ರವ
ನವವಿಧ ರಸದಿಂ ಪೇಳಿದೆ ಶಿಷ್ಯರಿಗೆ
ಭುವಿಯಲಿ ಮೆರೆದೆಯೋ ಮಧ್ವಾನುಜ ತೆರ
ಪವನ ಮತಾಬ್ಧಿಯ ಸೋಮನೆ ಶರಣೆಂಬೆ ೨

ರಿಕ್ತಬ್ರಹ್ಮನ ಭಕ್ತರನೊಲ್ಲನು
ಯುಕ್ತಿಗಳೆಂಬುವ ಮಲ್ಲಿಗೆ ಪಟ್ಟಲಿ
ಶಕ್ತಯತೀಂದ್ರನೆ ಅಡಗಿಸಿ ಸರ್ವೋ-
ದ್ರಿಕ್ತನ ಗುಣಗಣ ಸಾಧಿಸಿ ನೀ ಮೆರೆದೇ ೩

ತೀರ್ಥಕ್ಷೇತ್ರವ ಪಾವನಗೈಯ್ಯಲು
ಸುತ್ತುತ ನೀಡಿದೆ ತೀರ್ಥಪ್ರಬಂಧವನೂ
ಪಾರ್ಥಿವ ಮೊರೆಯಿಡೆ ಅಕ್ಷತೆ ನೀಡುತ
ಶತ್ರುಗಳಳಿಸುತ ಪೊರೆದೆಯೊ ಕರುಣಾಳು ೪

ಅರವತ್ನಾಲ್ಕು ಕಲಾಜ್ಞನೆ ಗುಣನಿಧಿ
ಸುರಗಣಗಚ್ಚರಿಯೇ ಸರಿ ತವ ಮಹಿಮ
ಹರಿಸಿದೆ ಮೃತ್ಯುವ ರಾಜನ ಅಳಿಯಗೆ
ಸಿರಿಪತಿ ವ್ಯಾಸರ ಕಂಡೆಯೊ ಪ್ರತ್ಯಕ್ಷ ೫

ಗುಂಡಕ್ರಿಯೆ ವೈಕುಂಠ ವರ್ಣನೆ
ಕಂಡಕಂಡ ಪದಪುಂಜವ ಪಾಡುತಲೀ
ಕೊಡಮ ಭಾಷಾ ಸಡಗರವೆಂಬುದ
ಪಂಡಿತನಿಕರಕೆ ತೋರಿದೆ ಯತಿತಿಲಕಾ ೬

ಜಂಗಮಗರುವನ ಭಂಗಿಸೆ ತವಕದಿ
ಇಂಗಿಸಿ ಸಲಹಿದೆ ವಿಪ್ರರ ಕಷ್ಟಗಳ
ಗಂಗಾಪಿತ ತ್ರಿವಿಕ್ರಮ ದೇವನ
ಮಂಗಳ ಸುರಿಸಲು ಸ್ವಾದಿಲಿ ಸ್ಥಾಪಿಸಿದೆ ೭

.............................................. ೮

ಇಂದ್ರನ ದೂತರ ತಡೆಯುತ ದಿನತ್ರಯ
ಚಂದದಿ ಕುಳಿತೆಯಾ ಬೃಂದಾವನದೊಳಗೆ
ಇಂದಿಗು ನೋಳ್ಪರು ಬುಧಜನ ನಿಮ್ಮನು
ವೃಂದಾರಕಗಣ ವಂದಿತ ಚರಣಯುಗ ೯

ಸುಂದರ ಹಯಮುಖ ರಾಮನು ಕೃಷ್ಣನು
ವೇದವ್ಯಾಸರು ಹನುಮಾದಿ ತ್ರಯರು
ಮಧ್ಯದಿ ಕುಳಿತಿಹ ನಿನ್ನ ಸುನಾಲ್ಕೆಡೆ
ನಿಂದಿಹರೆಂಬುದು ಸಿದ್ಧವು ಮಹಮಹಿಮಾ ೧೦

ಬೃಂದಾವನ ಪಂಚದಿ ಹರಿ ತಾನಿಹ
ಚಂದದಿ ಸೇವೆಯ ಕೊಳ್ಳುತ ನಿನ್ನಿಂದ
ಸುಂದರ ದಶಗಳ ಪಂಚನುರೂಪವ
ವಂದಿಸಿ ನೋಡುತ ನೆನೆಯುವೆ ಏನೆಂಬೆ ೧೧

ಗಂಗಾಪಿತ ತ್ರಿವಿಕ್ರಮದೇವನ
ಹಿಂಗದೆ ನೆನೆಯುವೆ ಲಕ್ಷಾಭರಣವನು
ರಂಗಗೆ ನೀಡಿದೆ ನಮ್ಮಯ ಭವವನು
ಇಂಗಿಸೆ ಕಷ್ಟವೇ ಗುರುವರ ದಯಮಾಡೋ ೧೨

ಜಯಮುನಿ ಹೃದಯದಿ ವಾಯುವಿನಂತರ
ಜಯದಿಂ ನಲಿಯುವ ಕೃಷ್ಣವಿಠಲನ
ದಯದಿಂ ತೋರಿಸು ಭಾವೀಜಯಾಸುತ
ಹಯಮುಖ ಕಿಂಕರ ನಮಿಸುವೆ ಭೂಯಿಷ್ಠಾ ೧೩

(೭೬)

**ವಾದಿರಾಜ ಗುರುರಾಜರ ಕೊಂಡಾಡಿ ಜನಿಪ ಸುಖವನು ಬೇಡಿ ಪ**

ಸೋದೆ ಸ್ಥಳದಲಿ ನಿಂತು ಮೆರೆವನಯ್ಯ
ಹಯವದನನ ಪ್ರಿಯ ಅ.ಪ

ಮೋದತೀರ್ಥ ಮತವಾರಿಧಿಪೂರ್ಣಚಂದ್ರ ಸದ್ಗುಣ ಸಾಂದ್ರಾ
ಮೇದಿನಿಯೊಳಗಿಹ ತೀರ್ಥ ಕ್ಷೇತ್ರವ ಚರಿಸಿ ಸಂತರನುದ್ಧರಿಸಿ
ಸಾದರದಲಿ ಹರಿ ಮಹಿಮೆಯ ಕೊಂಡಾಡಿ ಪ್ರಬಂಧವನು ಮಾಡಿ
ವಾದಿಗಳೆಂಬುವ ಗಜಕುಲ ಹರ್ಯಕ್ಷನಾಗಿಹ ಹರಿದೀಕ್ಷಾ ೧

ಎರಡೀರರುವತ್ತು ವಿದ್ಯಾಪೂರ್ಣನೆನಿಸೀ ದೂಷಕರನು ಜಯಿಸಿ
ಬಿರುದುಗಳನಪಹರಿಸಿದ ಯತಿವರ್ಯ ಹರಕಾರ್ಯ ಧುರ್ಯ
ವರ ಭೈಷ್ಮೀಶನ ವಿಜಯದ ಕಾವ್ಯವನು ಬಹುಪರಿ ಮಹಿಮೆಯನು
ವಿರಚಿಸಿ ಕವಿಕುಲ ಮಾನ್ಯನೆನಿಸಿಕೊಂಡ ಹರಿದಾಸ ಪ್ರಚಂಡಾ ೨

ಭೂತ ಬ್ರಹ್ಮರಾಕ್ಷಸ ಬಂದಿವರೊಳು ವಾದಿಸಿ ಮಾರ್ಗದೊಳು
ಸೋತು ಆಜ್ಞಾಧಾರಕರಾಗಿರುತಿಹರು ಅನುದಿನ ಸೇವಕರು
ಭೂತಳದ ಜನರು ಬೇಡಿದ ಇಷ್ಟಾರ್ಥ ಕೊಡುವಂಥ ಸಮರ್ಥ
ಧಾರುಣಿಪತಿ **ಗೋಪತಿವಿಠಲ** ನಿನ್ನೊಳಗಿಹನಲ್ಲ ೩

(೭೭)

**ವಾದಿರಾಜ ಗುರುವೇ ಪಾದಾರಾಧಕ ಸುರತರುವೇ** ಪ

ಮೋದವ ಕೊಡುವುದು ನೀ ದಯದಿಂದಲಿ
ಸ್ವಾದಿನಿಲಯ ತವ ಪಾದವ ನಮಿಸುವೆ ಅ.ಪ.

ಮೇದಿನಿಯೊಳು ಚರಿಸಿ ಜನರೊಳಗಾಧ ಮಹಿಮರೆನಿಸಿ
ಮೋದಮುನಿಯ ಸುಮತೋದಧಿ ಚಂದಿರ
ವಾದಮದಗಜ ಮೃಗಾಧಿಪರೆನಿಸಿದ ೧

ಯುಕ್ತಿಮಲ್ಲಿಕಾದಿ ಬಹು ಸರಸೋಕ್ತ ಸಹಿತವಾಗಿ
ಭಕ್ತಿ ಹುಟ್ಟಿಸುವ ರುಕ್ಮಿಣೀಶ ವಿಜಯಾಖ್ಯ
ಗ್ರಂಥದಿ ಚಮತ್ಕೃತಿ ತೋರಿದ ೨

ಭಾಗವತರ ಪ್ರಿಯಾ ನಮಿಸುವೆ ವಾಗೀಶರ ತನಯಾ
ಯೋಗಿವರ್ಯ ಕವಿಗೇಯ ದಯಾಕರ
ಭೋಗಪುರೀಶನ ರೋಗವ ಕಳೆದೀ ೩

ರಾಜನನ್ನು ಪೊರೆದಿ ಯತಿಕುಲ ರಾಜರೆನಿಸಿ ಮೆರೆದಿ
ವಾಜಿವದನ ಘನ ರಾಜೀವಯುಗಲ
ಪೂಜಿಸಿ ಜಗದಿ ವಿರಾಜಿಸಿದಂಥ ೪

ಭೂತಭಯವ ಬಿಡಿಸಿ ಭಜಕರ ಪಾತಕ ಪರಿಹರಿಸಿ
ಖ್ಯಾತ ಕಾರ್ಪರ ಕ್ಷೇತ್ರದಿ ನರಮೃಗ
ನಾಥನ ಪರಮ ಪ್ರೀತಿಯ ಪಡೆದ ೫

(೭೮)

**ಸುಳಾದಿ**

(ಧ್ರುವತಾಳ)
ವಾದಿರಾಜ ಗುರುವೇ ಭಕುತಿಯಿಂದಲಿ ನಿಮ್ಮ
ಪಾದ ಕಂಜವನು ನಂಬಿದ ಮಾನವ
ಈ ಧರೆಯೊಳಗೆಲ್ಲಾ ವೈರಾಗ್ಯ ಭಕ್ತಿ ಜ್ಞಾ-
ನಾದಿಗಳಿಂದ ಪರಿಪೂರ್ಣನಾಗಿದ್ದು ಮಹ
ಮೋದ ಪಡುವನು ಸಕಲದೊಳಗ-
ಗಾಧ ಸತ್ಕೀರ್ತಿಯನು ಪಡೆದು ನಿತ್ಯ
ಭೂದೇವರಿಂದ ಬಲು ಪೂಜೆಗೊಂಡ ನಂತರ
ಆದಿತೇಯರೊಳು ಮಾನ್ಯನಾಗುವ
ಮೇದಿನಿಯೊಳು ನಿಮ್ಮ ದಯ ಮಾತ್ರ ಪಡೆಯಲು
ಮಾಧವನು ಕರ ಬಿಡದೆ ಪೊರೆವ
ಮೇಧಾವಿ ತಂದೆಶ್ರೀಪತಿವಿಠಲನ
ಪಾದಾರಾಧಕರ ನಂಬಿದವರಿಗೆ ಸುರಧೇನು ೧

(ಮಟ್ಟತಾಳ)
ಸುರುಚಿರ ಸತ್ಸೋದೆಪುರದಲ್ಲಿ ನೆಲಸಿದ್ದು
ವರ ಧವಳಗಂಗಾದಿ ತೀರ್ಥಗಳನು
ಧರೆಯಲ್ಲಿ ವಿರಚಿಸಿ ಮಹಮಹಿಮೆಯನಿಟ್ಟು
ಹರ ಮಾರುತಿ ಗೋಪಾಲಕೃಷ್ಣರನು ಸ್ಥಾಪಿಸಿ ಮೋದದಲಿ
ವರ ಕ್ರೂರ ನಾರಾಯಣ ಭೂತರ ಕೈಲಿ, ಬ-
ದರಿಯಿಂದಲಿ ತ್ರಿವಿಕ್ರಮ ದೇವರನು
ಅರೆಘಳಿಗೆಯೊಳಗೆ ರಥಸಹಿತ
ತರಿಸಿ ಪ್ರತಿಷ್ಠೆಯನು ಮಾಡಿದ ಧೀರ
ಪರಮಪುರುಷ ತಂದೆಶ್ರೀಪತಿವಿಠಲನ
ವರಕರುಣಾ ಪಾತ್ರ ವಿದ್ವಜ್ಜನ ಮಿತ್ರ ೨

(ತ್ರಿಪುಟ ತಾಳ)
ವಾಗೀಶತೀರ್ಥರ ಕರಪದ್ಮೋದ್ಭವರೆ ವೈ-
ರಾಗ್ಯಾದಿಗುಣದಿಂದ ಪರಿಪೂರ್ಣರೆ
ಯೋಗಿ ಜನರಿಗೆ ಅತಿ ಪ್ರಿಯರೆ ತ್ವತ್ಪಾದ
ಹೇಗೆ ಕಾಂಬುವೆನಾ ಇನ್ನ್ಯಾಂಗೆ ಕಾಂಬುವೆ
ಬಾಗಿ ಬೇಡುವೆನಾ ಇನ್ನೊಂದು ಭಾಗ್ಯವನೊಲ್ಲೆ
ಹೇಗಾದರೂ ನಿಮ್ಮ ಪಾದಯುಗಳವ
ಬೇಗದಿಂದಲಿ ತೋರಿ ಸಂಸಾರವೆಂಬಂಥ
ಸಾಗರದಿಂದಲಿ ಕಡೆಹಾಯಿಸೋ
ಶ್ರೀಗುರು **ತಂದೆಶ್ರೀಪತಿವಿಠಲ**
ಯೋಗದಿಂದಲಿ ಭಜಿಪ ಸುಮತಿ ಪಾಲಿಸೊ ಮುನಿಪ ೩

(ಅಟ್ಟತಾಳ)
ನಿಷ್ಠೆಯಿಂದಲಿ ಮನಮುಟ್ಟಿ ನಿಮ್ಮ ಪಾದ
ಘಟ್ಯಾಗಿ ಭಜಿಸಲು ಇಷ್ಟ ಪ್ರಾಪ್ತವು ಅ-
ನಿಷ್ಟವು ಪರಿಹಾರ ಕುಷ್ಠಿಯಾದವ ಬಲು
ಶಿಷ್ಟನೆಂದೆನಿಸುವ ಕಷ್ಟ ದಾರಿದ್ರ್ಯವು
ಮುಟ್ಟವು ಕೇಳು, ಕಣ್ಣು ಮಿಟ್ಟಿಸದಿದ್ದರು
ದೃಷ್ಟಿವಂತನಾಗುವ, ಹುಟ್ಟು ಮೂಕನು-
ತ್ಕೃಷ್ಟ ಮಾತಾಡುವ ಪುಟ್ಟುವುದು ಜ್ಞಾನ-
ದುಷ್ಟ ಗ್ರಹಾದಿಗಳು ನಷ್ಟವಾಗುವವು
ಶ್ರೇಷ್ಠ ಮಾರುತಿ **ತಂದೆಶ್ರೀಪತಿವಿಠಲ**ನ ದಯ
ಪುಟ್ಟುವುದಕೆ ನಿಮ್ಮ ದಯ ಮೊದಲಲಿ ಬೇಕು ೪

(ಆದಿತಾಳ)
ಪರಮಹಂಸರೆ ನಿಮ್ಮ ಸುರುಚಿರ ಮಹಿಮೆಯ
ಧರೆಯೊಳು ಸುಜನರಾಡುವುದು ನಿಜವೆಂದು ನಾ
ಮರೆಯ ಹೊಕ್ಕೆ ನಿಮ್ಮ ಅರೆಮನ ಮಾಡದಲೆ
ಪರಮ ರಜತಪೀಠ ಪುರದಲಿ ನೆಲೆಸಿಪ್ಪ
ಹರಿಯ ಪಾದವ ತೋರಿ, ತರುವಾಯ ನಿಮ್ಮ ಪಾದ
ಸರಸಿಜವ ತೋರಿ ಎನ್ನಕರಕರಿ ಮತಿಯನ್ನು

ಪರಿಹಾರ ಮಾಡಿ ಬೇಗ ಪರಮ ಭಕುತಿ ಜ್ಞಾನ
ವಿರಕ್ತಿಯನ್ನು ಕೊಟ್ಟು ಪೊರೆವುದೋ ನಿಮ್ಮ ಪಾದ
ಶರಣರೊಳಾಡಿಸಿರಿ ಗುರುವೆ ನೀ ಮರೆಯದಲೆ
ಹರುಷವೀವುದು ತಂದೆ ಶ್ರೀಪತಿವಿಠಲನ್ನ
ನೆರ ನಂಬುವಂತೆ ಮಾಡೊ ಅರೆಮನ ಮಾಡದಲೆ ೫

( ಜತಿ)
**ತಂದೆಶ್ರೀಪತಿವಿಠಲ** ಪ್ರೀಯ ವಾದಿರಾ-
ಜೇಂದ್ರಾರ್ಯ ಶ್ರೀಮದಾನಂದತೀರ್ಥ ಮುಂದೆ ನಿಜ

(೭೯)

**ವಾದಿರಾಜ ಗುರುರಾಜರ ಚರಣಕೆರಗಿರೋ**
ಸಂದೇಹ ಇಲ್ಲದೇ ಇವರ ಭಜಿಸಿ ಬದುಕಿರೋ ಪ

ಗೌರಿಗದ್ದೆ ಕ್ಷೇತ್ರದಲ್ಲಿ ರಾಮಾಚಾರ್ಯ ಸರಸ್ವತೀ ।
ವಿಪ್ರಶ್ರೇಷ್ಠರ ನಿಮಿತ್ತೀಕರಿಸಿ ಇಳೆಯಲಿ ತೋರಿಹರು ೧

ಯೋಗಿ ವಾಗೀಶತೀರ್ಥರ ಕರಕಮಲಜಾತ- ॥
ರಾಗಿ ವಾದಿರಾಜತೀರ್ಥರಾದ ವಾದಿಗಜಸಿಂಹ ೨

ವೀರಭದ್ರೋಪಬಲಿ ನಾರಾಯಣ ಭೂತರಾಜ ।
ಪರಿ ಪರಿ ವಿಧದಿ ಇವರಿಗೆ ಸೇವೆ ಮಾಡುವರು ೩

ವಾದಿರಾಜರ ಭಕ್ತರ ಸರ್ವ ಬಾಧೆಗಳ ಪರಿಹರಿಸೆ ।
ಒದಗುವರು ಭಾವಿರುದ್ರರು ಭೂತರಾಜರು ೪

ಯುಕ್ತಿಮಲ್ಲಿಕಾದಿ ದಿವ್ಯ ಶ್ರುತಿಸ್ಮೃತಿ ಯುಕ್ತಯುತ ।
ಗ್ರಂಥಗಳ ಕುಮತ ಭಂಜಕ ಜ್ಞಾನ ಪುಂಜವು ೫

ತ್ರಿವೃನ್ನಾಮ ತ್ರಿವಿಕ್ರಮನ ಸೋದೆಯಲ್ಲಿ ನಿಲ್ಲಿರಿಸಿದ ।
ಭಾವಿಸಮೀರರ ನೇಮಿಸಿ ಕ್ಷೇಮಾಕಾಂಕ್ಷಿಗಳು ೭

ಧವಳ ಗಂಗೆಯಲಿ ವೇದವ್ಯಾಸ ಮುಂದೆ
ಪವಿತ್ರ ವೃಂದಾವನದಿ ಇಹರ ನೋಡಿ ಧನ್ಯರು ನಮಸ್ಕರಿಸುತ ೮

(೮೦)

**ವಾದಿರಾಜ ಗುರುವೇ ನೀ ಮೂಜಗದೊಳು ಪ್ರಖ್ಯಾತಾ** ಪ

ಆದರದಲಿ ಸೇವಿಪ ಭಕುತರ ಪೊರೆಯುವ ಮಹದಾತಾ ಅ.ಪ

ರುಕ್ಮಿಣೀಶ ವಿಜಯದ ಕಾವ್ಯವ
ರಚಿಸಿ ಮೆರೆದಾತ
ಲಕ್ಷ್ಮೀರಮಣನ ಪರಿಪರಿ ಮಹಿಮೆಯ
ಜಗದೊಳು ವಿಸ್ತರಿಸಿದಾತ ೧

ಮಾತೆಯ ಹರಕೆಯ ಮರೆಯದೆ
ಹರಿಗೆ ಸಮರ್ಪಿಸಿದಾತ
ಖ್ಯಾತ ಮಹಿಮ ವೇದವ್ಯಾಸರ
ಸಮ್ಮುಖದೊಳಿರುವಾತ ೨

ಯುಕ್ತಿಮಲ್ಲಿಕೆ ಎಂಬ ಶಾಸ್ತ್ರವ ಬಲು
ಯುಕ್ತಿಯಲಿ ರಚಿಸಿದಾತ
ಶಕ್ತರಿವರು ಹರಿಭಕ್ತ ಶ್ರೇಷ್ಠರು
ಶರಣರ ಪೊರೆದಾತ ೩

ದುಷ್ಟರಾದ ದುರ್ವಾದಿಗಳನು
ಜಯಿಸುತ ಮೆರೆದಾತ
ಶಿಷ್ಟರಿವರು ಪರಮೇಷ್ಟಿ ಪದವಿಯ
ಸಾಧಿಸಿ ಮೆರೆದಾತ ೪

ವಿಷಮಿಶ್ರಿತ ನರಹರಿ ನೈವೇದ್ಯವ
ಅರಿತುಂಡು ಅರಗಿಸಿಕೊಂಡಾತ
ಕುಸುಮಕಾಸಾರದಿ ಭೂಸುರ ರಾಮಾಚಾರ್ಯರಿಗೆ
ಸುತನೆನಿಸಿದಾತ ೫

ಜ್ವರಪೀಡಿತ ಕೃಷ್ಣನಾಮ ಯತಿಗಳಿ-
ಗನುಗ್ರಹಿಸಿದಾತ
ಜ್ವರಾಭಿಮಾನಿ ದೇವತೆ ಪ್ರಾರ್ಥಿಸಲು
ತನ್ನಲ್ಲೆ ನಿಲಿಸಿಕೊಂಡಾತ ೬

ತುರುಕ ಮಾಂತ್ರಿಕನ ತಂತ್ರಕೆ ಸಿಲುಕಿದ
ಭೂಸುರನ ಪೊರೆದಾತ
ತುರುಕರಾಜನ ಸುತನನು ಬದುಕಿಸಿ
ಅನುಗ್ರಹಿಸಿದ ಮಹದಾತಾ ೭

ಲಿಂಗಾಯತ ಗುರುವರ ಸಭಾಂಗಣ ಮಧ್ಯದಿ
ವೇಶ್ಯಾಂಗನೆ ಕಾಲಲಿ ಒದೆಸಿದಾತ
ಅಂಗಜಪಿತ ಅಹಿರಾಜಶಯನ ತ್ರಿವಿಕ್ರಮನ
ತಂದು ನಿಲ್ಲಿಸಿದ ಪ್ರಖ್ಯಾತ ೮

ಲಕ್ಷಾಭರಣ ಗ್ರಂಥವ ರಚಿಸಿ
ಲಕ್ಷ್ಮೀಪತಿಗೆ ಸಮರ್ಪಿಸಿದಾತ
ಲಕ್ಷದೀಪೋತ್ಸವದಿ ಸುರಿವ ಮಳೆಯ-
ನಿಲ್ಲಿಸಿ ಆಶ್ಚರ್ಯ ತೋರಿಸಿದಾತ ೯

ವಿಜಯ ತಗರದಿ ಪ್ರಸಂಗಾಭರಣರೆಂಬ-
ಬಿರುದು ಪಡೆದ ಭಾವಿ ವಿಧಾತ
ರಾಜಾಧಿರಾಜ ಗುರುಸಾರ್ವಭೌಮ
ಸುಜನ ಶಿರೋಮಣಿ ಹೇ ತಾತ ೧೦

ಬದರಿಯ ಮಾರ್ಗದಿ ಜನರ ಬಾಧಿಪ
ಬ್ರಹ್ಮ ರಾಕ್ಷಸನ ಗರ್ವ ಮುರಿದಾತ
ಸಾಧು ಸನ್ಮುನಿವರ್ಯ ಆತಗೆ ಭಾವಿ-
ರುದ್ರ ಪದವಿಯ ನೀಡಿದ ಮಹದಾತ ೧೧

ಮಿಂಚು ಕೋಟಿ ಸಮ ಪಂಚ
ವೃಂದಾವನದಿ ಪ್ರತ್ಯಕ್ಷದಿ ನಿಂದಾತಾ
ಸಂಚಿತ ಕರ್ಮಗಳೆಲ್ಲವ ಕೊಂಚಿಸಿ
ವಂಚನೆಯಿಲ್ಲದೆ ಪೊರೆದಾತ ೧೨

ಹನುಮ ಭೀಮ ಮಧ್ವರ ಸಹಿತದಿ
ವೃಂದಾವನದೊಳಗಿರುವಾತ
ಭಾನುಸನ್ನಿಭ ಸುಪ್ರಸನ್ನ **ಫಣಿ-**
**ಶಾಯಿವಿಠಲನ** ನಿಜದೂತ ೧೩

(೮೧)

**ವಾದಿರಾಜ ಗುರುವೇ ಭಜಿಪರ ಆದಿವ್ಯಾಧಿ ಕಳೆವೆ** ಪ

ಸಾಧು ಜನಕೆ ಶುಭವೇದಶಾಸ್ತ್ರ ಸ-
ದ್ಬೋಧದಿ ಮೋದಪ್ರಮೋದವನೀವೆ ಅ.ಪ

ದಂಡಕಮಂಡಲವ ಧರಿಸಿ ಉದ್ದಂಡಸ್ಫೂರ್ತಿ ಮತವಾ
ಖಂಡಿಸಿ ಜಗದೊಳು ಪುಂಡರೀಕಾಂಬಕ
ಅಂಡಕಧಿಪ ನಿಜ ಗಂಡನೆಂದರುಹಿದೆ ೧

ಈ ಕ್ಷಿತಿಯೊಳಗುದಿಸಿ ದಾಸ ಸುದೀಕ್ಷೆಯ ಸ್ಫುಟಪಡಿಸಿ
ಅಕ್ಷರೇಢ್ಯನಡಿ ಈಕ್ಷಿಸಿ ತೀಕ್ಷ್ಣದೃಷ್ಟಿಯ ನೀವೆಯೊ
ಪಕ್ಷಿವಾಹನ ಹಯವದನ ಭಜಕ ಗುರು ೨

ಭೂತಪಂಚವಿವರ ತಿಳಿದಧಿಭೂತತ್ರಯ ಶ್ರೀವರಾ
ಭೂತರಾಜನತಿ ತಮವ ಕಳೆದ ಮಹ
ಭೂತ ನಾಗಶಯನವಿಠಲನ ತೋರಿದೆ ೩

(೮೨)

ವಾದಿರಾಜ ಗುರುಸಾರ್ವಭೌಮ ಸು –
ವಾ೯ದಿ ವಿಭಂಜನ ನಮೊ ನಮೋ
ಮೋದತೀರ್ಥ ಸುಮತಾಂಬುಧಿ ಶಶಿ
ಮಾಧವ ಪದ ಪಂಕಜ ಮಧುಪ ನಮೋ ಪ

ಸ್ವಾದಿವಾಸ ಮುನಿ । ಮೋದ ತೀರ್ಥಪದವಾ–
ರಾಧಕ ತೇ ನಮೋ ನಮೋ ॥
ಮೇದಿನಿ ಸುರರಿಗೆ । ಮೋದ ಪ್ರದಾಯಕ–
ನಾದಿ ಬಂಧನ ಛೇದ ನಮೋ ॥
ಶ್ರೀದನ ಗುಣವಾಪಾದಿಸಿ ತನ್ನೊಳು
ಮೋದಿಪ ಮಾಯ್ಗಜ ಸಿಂಹ ನಮೋ ॥
ಬೋಧಿಸಿ ದಶಮತಿ । ಬೋಧ ಶಾಸ್ತ್ರದು–
ವಾ೯ದಿಗಳ್ ಜೈಸಿದ ಯತಿಯೆ ನಮೋ ೧

ವಾಗೀಶರ ಕರಜಾತ ನಮೋ ನಮೊ
ಯೋಗಿ ಕುಲಾಬ್ಧಿಗೆ ಚಂದ್ರ ನಮೋ ॥
ಭಾಗವತರ ಸಂಪ್ರೇಮ ನಮೋ ನಮೊ
ಆಗಮಜ್ಞತೇ ನಮೋ ನಮೋ ॥
ಭೋಗಿಪುರೀಶ ಸುಮೋದ ನಮೋ ನಮೊ
ಕಾಗಿನಿ ತೀರಗ ಭಜಕ ನಮೋ ॥
ಭಾಗೀರಥಿಪಿತ ಹಯಮುಖನನು
ರಾಗದಿ ಭಜಿಸುವ ಯೋಗಿ ನಮೋ ೨

ಭೂಸುರ ಋಣ ಕ್ಲೇಶಾಪಹ ನಮೊ ನಮೊ
ಮೂಷಕ ಬಹು ಭಯ ನಾಶ ನಮೋ ॥

ಕಾಶಿ ಬದರಿ ರಾಮೇಶ್ವರ ಕ್ಷೇತ್ರ ಪ್ರ-
ವಾಸಿಸಿ ಸತ್ಕಥೆ ಕರ್ತೃ ನಮೋ ॥
ಲೇಶ ಮಣ್ಣು ತಾ ಕೊಡುತಲಿ ವಿಪ್ರಗೆ
ದೋಷವ ಕಳೆದಗೆ ನಮೋ ನಮೋ ॥
ಮೀಸಲ ಮನದಿ ನಿಷೇವಿಸೆ ಸಂಸೃತಿ (?)
ಶೋಷಿಪ ಶ್ರೀ ಲಾತವ್ಯ ನಮೋ ೩

ಎರ್ಡು ಭುಜದಿ ಹಯವದನನ ಚರಣವ
ಬಿಡದೆ ಧರಿಸುವಗೆ ನಮೋ ನಮೋ ॥
ಮೃಡನುತ ನಾ ಹರಿಘ್ಹರಿವಾಣದಿ
ಕಡಲೆ ಪೂರ್ಣ ಬಿಡದೀವಗೆ ನಮೋ ॥
ನಡುಮನೆ ದ್ವಿಜಸುತ ನಿಲಿಸ್ಯರ್ಚಿಸಿದಾ
ಉಡುಪಿನ ಕೃಷ್ಣಾರ್ಚಕಗೆ ನಮೋ ॥
ಸಡಗರದಲಿ ಪರ್ಯಾಯಗಳನು ಮಾ
ರ್ಪಡಿಸಿರುವಾತಗೆ ನಮೋ ನಮೋ ೪

ಪರಿಪರಿ ಗ್ರಂಥವು ಟೀಕಂಗಳ ತಾ
ವಿರಚಿಸಿದಾತಗೆ ನಮೋ ನಮೋ ॥
ಸರಸವು ರುಕ್ಮಿಣಿಪತಿವಿಜಯವ ತಾ
ಬರೆದು ಪೊಣೆಯಲಿ ಮೆರೆದಗೆ ನಮೋ ॥
ಎರಡೆರಡೊಂದು ವೃಂದಾವನ ಸ್ವಾದಿಲಿ
ಸುರನದಿ ತಟ ನಿಲಿಸಿದವಗೆ ನಮೋ ॥
ಎರಡೊಂದು ವಿಕ್ರಮನುತ್ಸವ ಗೈಸಿದ
**ಗುರುಗೋವಿಂದವಿಠಲಾರ್ಚಕಗೆ** ನಮೋ ೫

(೮೩)

**ವಾದಿರಾಜ ಧೀರ ಯತಿವರ ವಾದದಲಿ ಶೂರ**
ಮೋದತೀರ್ಥರ ಮತವ ಪೊಂದಿದ
ಸಾಧುಗಳನು ಉದ್ಧಾರ ಮಾಡುವ ೧

ರಂಗ ಮಂಗಳ ಉತ್ತುಂಗ ವಿಕ್ರಮಯೆನುತ
ಶೃಂಗೇರಿ ಮಠದಿ ಜಯಕೇತನ ಹಾಕಿದ ೨

ಒಡೆಯ ಹಯಕ್ರನಿಗೆ ಕಡಲೆ ಹೂರಣ ಮಾಡಿ
ಅಡಿಗಡಿಗೆ ಅವನ ಪಾದ ಬಿಡದೆ ಆರಾಧಿಸುವ ೩

ವಾದಿಗಜ ಪಂಕಜನೆನಿಸಿ ಮೇದಿನಿಯೊಳಗೆ ಮೆರೆದ
ಮಾಧವನ ಪ್ರಿಯ ದಾಸ ಸದಾನಂದದೊಲಿರುವ ೪

ಅಜಪದಕೆ ಅರ್ಹನಾದ ಋಜುಗಣ ಜೀವೋತ್ತಮನ
ನಿಜಪದಕೆ ಬರುವ **ವಿಜಯವಿಠಲ**ನ ದಾಸ ೫

ಟಿಪ್ಪಣಿ : 'ಶೃಂಗೇರಿ ಮಠದಿ ಜಯಕೇತನ ಹಾಕಿದ' ಇದರ ಅರ್ಥ ಅದ್ವೈತಮತವನ್ನು ಗೆದ್ದ ಎಂದಾಗುವುದು. ಇದೇ ಹಾಡು ಪಾಠಾಂತರಗಳೊಡನೆ ಬೇರೆಯಾಗಿ ಲಿಂಗಸೂಗೂರಿನ ವಿಜಯದಾಸರು ಪದಗಳು ಭಾ-೨ರಲ್ಲಿ (ಕೀರ್ತನೆ ೧೮೭) ಬಂದಿದೆ.

(೮೪)

**ವಾದಿರಾಜಾ ಪಾಲಿಸು ಎನ್ನ** ಪ

ವಾದಿರಾಜ ತವ ಪಾದಸರೋಜಾ
ಮೋದಪರಾಗವ ಸಾದರ ನೀಡಿ ಅ.ಪ.

ಮೋದತೀರ್ಥಸುಮತೋದಧಿಚಂದಿರ
ಪಾದವ ನಂಬಿದೆ ನೀ ದಯದಲಿ ೧

ಅರ್ತಜನರ ಮನದಾರ್ತಿಯ ಕಳೆದಿಹ
ವಾರ್ತದಿ ಬಂದವನಾರ್ತಿಯ ಬಿಡಿಸೋ ೨

ಎಲ್ಲರಂತೆ ನೀನಲ್ಲವೊ ಜಗದೊಳು
ಬಲ್ಲಿದನೆಂಬೊದು ಬಲ್ಲೆ ಬಲ್ಲೆನು ೩

ಕರ್ತುರ್ಮಕರ್ತುರ್ಸಮರ್ಥನೆ ಎನ್ನನು
ಮರ್ತರೆ ಅನ್ಯ ಸಮರ್ಥರ ಕಾಣೆ ೪

ಕಾಮಧೇನು ಸಮ ಭೂಮಿಯ ತಳದಿ
ಕಾಮಿತ ನೀಡ್ವೈ ಸುರತರುವೇ ೫

ಮೋಕ್ಷದ ಕರುಣ ಕಟಾಕ್ಷದಿ ಎನ್ನಾ
ವೀಕ್ಷಿಸಿ ಮನದಾಪೇಕ್ಷವ ಸಲಿಸೋ ೬

ಯಾತಕೆ ಎನ್ನನು ಈ ತೆರ ಮಾಡಿದೇ
ನೀತ **ಗುರುಜಗನ್ನಾಥವಿಠಲ** ದೂತ ೭

(೮೫)

**ವಾದಿರಾಜ ಪಾಲಿಸೋ ಎನ್ನ** ಪ

ವಾದಿರಾಜ ತವ ಪಾದಾಶ್ರಿತನಪ-
ರಾಧ ಎಣಿಸದೆ ಮೋದಪಡಿಪುದೋ ಅ.ಪ.

ಋಜುಗಣ ಮಿಳಿತ ನೀರಜನೆ ನಿನ್ನಯ ಪಾದ
ಭಜನೆ ಮಾಡುವ ಎನ್ನ ಋಜುಮಾರ್ಗವ ಪಿಡಿಸೋ ೧

ಯತಿಕುಲದೊಳು ಶಿರೋರತ್ನ ವಾಗೀಶ
ತೀರ್ಥರ ಸುಕರಜಾಶ್ರಿತ ಕಲ್ಪಭೂಜ ೨

ವಾದಿಗಳೆದೆ ಶೂಲ ಭೂದೇವ ಪರಿಪಾಲ
ಮೇದಿನೀಪತಿ ಕೋಲಾರಾಧಕಶೀಲ ೩

ವಾಜಿವದನಪಾದ ರಾಜೀವ ಷಟ್ಪದ
ರಾಜರಾಜ ಗುರುರಾಜ ಸುತೇಜ ೪

ಪಂಡಿತಾಗ್ರಗಣ್ಯ ಪಾಂಡವಪ್ರಿಯನ
ತೊಂಡ ಕಮಂಡಲು ದಂಡ ಕೈಕೊಂಡ ೫

ನಿನ್ನವನೆಂದ ಮೇಲಿನ್ನು ಸಂಸಾರದಿ
ಬನ್ನ ಪಡಿಸದಿರಾಪನ್ನ ಪಾಲಕನೇ ೬

ವನಜಾಕ್ಷ **ಅಭಿನವಜನಾರ್ದನವಿಠಲನ**
ಘನ ರೂಪವನೇ ತೋರಿ ಪುನೀತನ ಮಾಡೋ ೭

(೮೬)

**ವಾದಿರಾಜ ಮದ್ಗುರುರಾಯ** ಪ

ಮಾಧವನಂಘ್ರಿ ಆರಾಧಿಸುವ ಧೀರ ಅ.ಪ

ಭೇದಾರ್ಥ ಸಿದ್ಧಾಂತವ ವಾದಿಗಳಿಗಿದಿರಾಗಿ
ಸಾಧಿಸುತ ಜನರ ಮೋದಪಡಿಸುವಂಥ ೧

ಮಂಗಳಾಂಗನಂತರಂಗದಿ ನೋಡುತ
ಸಂಗೀತದಲಿ ಪಾಡೆ ಭಂಗ ಓಡಿಸುವಂಥ ೨

ನಂದಿವಾಹನ ಅಮರೇಂದ್ರ ವಂದ್ಯ ನಮ್ಮ
ಇಂದಿರಾಪತಿಯೆಂದು ಮಂದರಿಗರುಪುವ ೩

ಬುಧರ ಮಧ್ಯದಿ ಸುಹೃದಯರೆನಿಸುವಂಥ
ಸದಾ ಸುಖನಿಧಿ ಹಯವದನನ ನಿಜದಾಸ ೪

ಯತಿ ಶಿರೋಮಣಿ ಸುಖವುಳ್ಳ ವಿಜ್ಞಾನಿ
ಪತಿತರನುದ್ಧರಿಸುವ ಮತಿಮಹ ಖತಿದೂರ ೫

ನರರಂತೆ ನೀನಲ್ಲ ಸುರರಂತೆ ಹರಿಯಲ್ಲ
ಮರಗಳಂತೆ ಕಲ್ಲ ತರುವಲ್ಲ ಕೇಳಯ್ಯ ೬

ರಘುಪತಿವಿಠಲ ಸಮ್ಮೊಗನಾಗಿ ನಿಮಗಿಪ್ಪ
ಅಗಣಿತ ಗುಣಧಾಮನ್ನಗಲದ ಮನವುಳ್ಳ ೭

(೮೭)

**ವಾದಿರಾಜ ಮುನಿಪ ವಂದಿಪ ಭಕುತಕುಮುದ ಉಡುಪ** ಪ

ಖೇದವ ಕಳೆಯುತ ಮೋದವ ಪಡೆಯುವ
ಭೇದಮತದ ಹಾದಿ ಸಾದರದಲಿ ತೋರೊ ಅ.ಪ

ವಾಗೀಶಯತಿಕುವರ ಯೋಗಿ ವ್ಯಾಸರ ಶಿಷ್ಯವರ
ಯೋಗಿಗಳರ್ಪಿಪ ಕೃಷ್ಣನ ಪೂಜೆಯ
ಜಾಗರೂಕತೆಯಿಂ ಪುನರ್ಯೋಜಿಸಿದೆ ಗಡ ೧

ತೀರ್ಥಕ್ಷೇತ್ರ ಮೆರೆಸಿ ಸರಸಭಾರತಿವಿಲಾಸ ಗೈಸಿ
ಪಾರ್ಥಸಖನ ವಿಜಯೋತ್ಸವಗೈದು ಗು-
ರ್ವರ್ಥವ ಬೆಳಗಿ ಯುಕ್ತಿಮಲ್ಲಿಗೆಯೆರೆದೆ ೨

ಪಾಮರರುದ್ಧರಿಸೆ ಪದಪಾಡ್ದನ ಶೋಭಾನೆ ರಚಿಸಿ
ಕುಮತಗಳರೆದು ವೈಕುಂಠವ ವರ್ಣಿಸಿ
ಸಮಲಕ್ಷವರ್ಪಿಸಿ ಹರಕೆ ಸಲ್ಲಿಸಿದೆ ೩

ಭೂತರಾಜಸೇವ್ಯ ನಿಜ ಋಜುರಾಜ ನೀ ಲಾತವ್ಯ
ಖ್ಯಾತ ಮೋದಮುನಿ ಮತ ಸ್ಥಾಪಿಸುತತಿಕು-
ಖ್ಯಾತರ ನೆಗ್ಗಿ ಹಯವದನನೊಲಿಸಿದೆ ೪

ವಂಚಕ ಬಲಿ ಪಾದ ಪದ್ಮಾಗುಟಜೆಯ ವರ ತಟದಿ
ಮಿಂಚುವ ಸೋದೆಲಿ ಪಂಚಬೃಂದಾವನದಿ
ಅಂಚಿತ ಮಧ್ವೇಶಾನಂತವಿಠ್ಠಲ ಪ್ರಿಯ ೫

(೮೮)

ವಾದಿರಾಜ ವಾದಿರಾಜ ಗುರುವೇ ದಯದಲಿ ನೀ ಪ

ಪಾದವ ತೋರಿಸಿ ಮೋದಬಡಿಸಿದೆ ಅ.ಪ

ಘನ ವಾಗೀಶರ ಮುನಿ ಕರಕಮಲದಿ
ಜನಿಸಿ ಮೆರೆದೆ ಸಜ್ಜನವಂತನೇ ೧

ಚತುರರೊಳಗೆ ನೀನತಿಶಯದಲ್ಲಿ ರಾ-
ಜಿತನಾಗಿ ಮೆರೆವ ಅತುಳ ಮಹಿಮನೇ ೨

ರಾಜರಾಜ ಗುರುರಾಜ ಗುಣಾಂಬುಧೇ
ವಾಜಿವದನ ಪದ ರಾಜೀವಾರ್ಚಕ ೩

ಪಾಪಿಯಾದ ಎನ್ನ ಪಾಲಿಪುದಕೆ
ಸ್ವಾಪ್ನದೊಳಗೆ ನಿನ್ನ ರೂಪವ ತೋರ್ದೆ ೪

ಮುನಿಗಳೊಳಗೆ ತಿಲಕನೆ ಅಭಿನವ-
ಜನಾರ್ದನವಿಠಲ ಪದ ವನಜಾಪರೋಕ್ಷಿ ೫

(೮೯)

ವಾದಿರಾಜ ಮುನಿಪಾ ಹಯಮುಖ
ಪಾದಕಮಲ ಮಧುಪಾ ಪ

ನೀ ದಯದಲಿ ತವ ಪಾದ ಧ್ಯಾನವನು
ಆದರದಲಿ ಕೊಟ್ಟಾದರಿಸೆನ್ನನು ಅ.ಪ

ಮೂಷಕ ಬಿಲದಿಂದ ಉದರಪೋಷಕೆ ಬರಲಂದು
ವಾಸುಕಿ ಭಯದಿ ನಿಮ್ಮಾಸನದೆಡೆ ಬರೆ
ಕ್ಲೇಶ ಕಳೆದು ಸಂತೋಷಗೈಸಿದೆ ೧

ಮುಂದೆ ಭೂತ ನರನಾ ಪ್ರೇರಿಸಿ ಹಿಂದೆವೊಬ್ಬ ನರನಾ
ನಿಂದಿರಿಸಿದೆ ಆನಂದದಿಂದ ಜನ
ವೃಂದ ನೋಡುತಿರೆ ಅಂದಣ ನಡಿಸಿದ್ಯೋ ೨

ಕ್ಷಿತಿಯೊಳು ಸತಿ ತನ್ನಾ ವಲ್ಲಭ
ಮೃತಿಯೈದಿರೆ ಮುನ್ನಾ
ಅತಿ ಶೋಕದಿ ಬಂದು ನುತಿಸಲು ಆ
ಪತಿಯನು ಬದುಕಿಸಿ ಹಿತದಿ ರಕ್ಷಿಸಿದೆ ೩

ನರಪತಿ ವ್ಯಾಧಿಯಲಿ ಬಳಲ್ವದ
ತ್ವರಿತದಿ ನೀ ಕೇಳಿ
ಹರುಷದಿ ವ್ಯಾಧಿಯ ಪರಿಹರಿಸ್ಯವನಿಗೆ
ಹರುಷದಿಂದಲಭಯವ ತೋರಿದೆ ೪

ಶಾಸ್ತ್ರ ಪ್ರಸಂಗದಲಿ ನಾರಾಯಣ ಭೂತರ ಗೆಲಿದಲ್ಲೆ
ಖ್ಯಾತಿಯಿಂದ ಬಹು ಮಾತನಾಡಿ ಶ್ರೀ-
ನಾಥನ ಮಂದಿರ ಪ್ರೀತಿಲಿ ತರಿಸಿದ್ಯೊ ೫

ತುರಗವದನ ಪಾದಾ ಭುಜಗಳಲಿ
ಧರಿಸಿಕೊಂಡು ಮೋದ ಕಡಲೆ ಮಡ್ಡಿಯನು
ಕರದಿಂದುಣಿಸಿದ ಗುರುವರಶೇಖರ ೬

ಆ ಮಹಾ **ಗೋಪಾಲವಿಠ್ಠಲ** ತಾಮರಸದಳಗಳ
ಧೀಮಂತರಿಗೆ ಸುಕಾಮಿತವನು ಕೊಡುವ
ಆ ಮಹಾಮಹಿಮ ೭

(೯೦)

**ವಾದಿರಾಜ ವಾದಿರಾಜ ಪಾಹಿಮಾಂ**
ವಾದಿರಾಜ ವಾದಿರಾಜ ವಾದಿರಾಜ ರಕ್ಷಮಾಂ ಪ

ಅಂದು ನಿನ್ನ ನೆನೆಯಲಿಲ್ಲ ನೊಂದೆನಯ್ಯ ಭವದಲಿ
ಇಂದು ನಿನ್ನ ಪಾದ ಕಮಲ ನಂಬಿ ಬಂದೆ ರಕ್ಷಿಸು ೧

ಸತಿಸುತರಾ ಮೋಹದಿಂದ ನಿನ್ನ ಮರೆತು ತಿರುಗಿದೆ
ಮತಿಗೆಟ್ಟು ಭಂಗಪಟ್ಟು ಚರಣಕೆರಗಿ ಸ್ತುತಿಸುವೆ ೨

ಕಾಮ ಲೋಭ ಮೋಹದಿಂದ ಅಂಧನಾಗಿ ಮೆರೆದೆನು
ಪ್ರೇಮದಿಂದ ಎನ್ನ ಸಲಹಿ ಮನ್ನಿಸಯ್ಯ ಸುರಗುರು ೩

ನನ್ನದೆಂಬುದೇನು ಇಲ್ಲ ನಿನ್ನದಯ್ಯ ಎಲ್ಲವು
ಎನ್ನ ಬಿಡದೆ ಸಲಹೊ ತುರಗವದನ ದಾಸ ಶ್ರೀಗುರು ೪

ಭಕ್ತ ಜನರ ಕಾಮಧೇನು ನಿನ್ನ ಚರಣ ದಾಸ ನಾನು
ಭಕ್ತನೆಂದು ಕಾಯೋ **ಗೋವಿಂದವಿಠಲಪಿಯ** ಭಕ್ತ ೫

(೯೧)

**ವಾದಿರಾಜ ಶರಣರ ಸುರಭೂಜ ವಾದಿರಾಜ** ಪ

ವಾದಿರಾಜ ಪ್ರತಿವಾದಿ ಗಜೇಂದ್ರ ಮೃ-
ಗಾಧಿರಾಜ, ವಿಬುಧೋದಧಿ ಚಂದ್ರ ಅ.ಪ

ಭಾಗೀರಥಿಯಂತ್ಯೋಗಿವರ ಶ್ರೀ
ವಾಗೀಶ ಕರಾಂಬುಜ ಸಂಭವನೇ ೧

ಪಾವಮಾನಿ ಸುಮತಾವಲಂಬಿಗಳ
ಪಾವನವೆಂದೀವುದು ವರವ ೨

ಎಲರುಣಿ ಭಯಕಂಜಲಿ ನಿಮ್ಮಾಸನ
ಕೆಳಗಿರೆ ಕಂಡದನುಳುಹಿದೆ ಕರುಣಿ ೩

ಗರಮಿಶ್ರಿತ ನರಹರಿ ನೈವೇದ್ಯವ
ಅರಿತುಂಡು ಅದನರಗಿಸಿಕೊಂಡೆ ೪

ಹಯವದನನ ಪದದ್ವಯ ಭಜಕಾಗ್ರಣಿ
ದಯದಿ ನೀ ವಿಪ್ರಗೆ ನಯನವನಿತ್ತೇ ೫

ಅರ್ಥಿಗಳಿಗೆ ಪರಮಾರ್ಥವ ತೋರಿಸೆ
ತೀರ್ಥಪ್ರಬಂಧವ ಕೀರ್ತನೆ ಗೈದೆ ೬

ಅದ್ವೈತ ಸಮಾಧಿ ಮಧ್ವಸುಸಿದ್ಧಾಂತಿ
ಇಧ್ಮ ಜಿಂಹ್ವದಿ ಪ್ರಧ್ವಂಸಿಸಿದೆ ೭

ನಮಿಪೆ ತ್ವತ್ಪದ ಕಮಲಗಳಿಗೆ ಮ-
ಧ್ವಮತ ಸರೋರುಹ ದ್ಯುಮಣಿಯೆ ನಿರತ ೮

ಯಮಿವರನೆ ತ್ರಿವಿಕ್ರಮನ ರಥೋತ್ಸವ
ಸಮಯವಿದೆಂದುತ್ತ್ರಮಣವ ತೊರೆದೆ ೯

ಬಂದು ಕರೆಯೆ ಪುರಂದರನಾಳ್ಗಳು
ಹಿಂದಟ್ಟಿದೆ ಕರ್ಮಂದಿಗಳರಸನೇ ೧೦

ಪೂತಾತ್ಮ **ಜಗನ್ನಾಥವಿಠಲನ**
ಖ್ಯಾತಿಯ ನುತಿಸುವ ನಾಥಜನಾಪ್ತ ೧೧

(೯೨)

**ವಾದಿರಾಜನ ಕೂಡೆ ವಾದವ್ಯಾತಕೋ** ಪ

ನಿಲ್ಲು ನಿಲ್ಲೆಲೋ ಸಲ್ಲದು ಗರ್ವ ಬಿಡಲೋ ಅ.ಪ.

ಗೆದ್ದು ವಾದಿಗಳನ್ನು ಗೆಲುವಿಲಿ
ಹೊಗಳಿಸಿಕೊಂಬರೋ ಆಚಾರ್ಯರೆಂಬರೋ ೧

ವಾಜಿಮುಖನ ದಯದಿಂದಲಿ
ವಿಲೋಲ ವಿಖ್ಯಾತರೋ ಶಿಷ್ಯರಿಗತಿ ಪ್ರೀತರೋ ೨

**ಬಾಳೆಹಳ್ಳಿಯ ರುದ್ರಾಕ್ಷಿ ಒಡೆಯನ**
ಗುರು ವಾದಿರಾಜರೆಂಬೊರೋ ಇದನು ನಂಬಿರೋ ೩

(೯೩)

**ವಾದಿರಾಜನ ಪಾದ ಭಜಿಸಿ ಭವ ಛೇದಿಸಿ ಪಡೆ ಮೋದವ** ಪ

ಶ್ರೀದನ ಪದಾರಾಧನ ಸಂಸಕ್ತನ ಲಾತವ್ಯನ
ಮೇದಿನೀಸುರ ಖೇದಹರ ಪ್ರತಿ
ವಾದಿಭೇದ ವಿನೋದಶೀಲನ ಅ.ಪ

ವಾಗೀಶಯತಿಕುವರ ನತಮಂದಾರಾ
ರಾಗರಹಿತ ಶುಭಕರ ಭೀಕರಾ ನಾಸ್ತೀಕರ ನಗಪವಿ-
ಕರ ಗುರುಪರಿಸರ ಯುಗಳಪದರೇಣುಗಳ ಧರಿಸಿ ತ್ರಿ-
ಜಗದಿ ಮೆರೆಯುವ ನಿಗಮಕೋವಿದ ೧

ವ್ಯಾಸೋಪದಿಷ್ಟನಾಗಿ ಕ್ಷೇತ್ರವ ತಿರುಗಿ
ವ್ಯಾಸ ಮಧ್ವರಿಗೆರಗಿ ಭೂತನ ಪೊರೆದಾತನ
ಹಯವದನನ ಸೇವಿಸುವನ
ಕ್ಲೇಶಪಡುತಿಹ ದಾಸ ಜನರ ವಿಲಾಸಪಡಿಪ ಸ- ೨

ನ್ಯಾಸರತ್ನನ ಹಯಮುಖನಂಘ್ರಿದ್ವಯ ಪದುಮಾಶ್ರಯ
ಪೀಯೂಷಪಾನಶ್ರೇಯ ಹುಡುಕುವ
ಜನಕೆರೆಯುವದಕೆ ಮೆರೆಯುವ ಸೋದೆಪುರದವ
**ತಂದೆವೆಂಕಟೇಶವಿಠಲನ**
ವಿಹಿತ ಜನರಿಗೆ ತೋರ್ವ ಕವಿಘನ ೩

(೯೪)

**ವಾದಿರಾಜನೆ ನಿನ್ನ ಪಾದಕ್ಕೆರಗಿ ನಾ**
ಮೋದದಿಂ ಬೇಡುವೆ ಮಾಧವನ ತೋರೋ ಪ

ಸಕಲ ವೇದ ಪುರಾಣ ಶಾಸ್ತ್ರಗಳೆಲ್ಲಾ
ಪ್ರಕಟಿಸಿದೆ ಕನ್ನಡದಿ ಪ್ರೇಮದಿಂದ
ನಿಖಿಳ ಜನರು ತಾವಾನಕ ದುಂದುಭಿಸುತನ
ಭಕುತಿಯ ಪಡೆದು ಮೇಣ್ಮುಕುತಿಯ್ಯೆದಲಿಯೆಂದು ೧

ಗಣನೆಯಿಲ್ಲದೆ ಕೀರ್ತನೆ ಸುಳಾದಿಗಳನ್ನು
ಮನವೊಲಿದು ಮಾಡಿದ್ದು ಜನರು ಪಠಿಸಿ
ವನಜನಾಭನ ಕರುಣವನು ಪಡೆದು ತಾ-
ವನುಭವಿಸಲಾನಂದವನೆನುತಲಿ ೨

ನಿನ್ನ ನೆನೆಯೆ ಧನ್ಯ ನಿನ್ನ ಪಾಡಲು ಮಾನ್ಯ
ನಿನ್ನ ಕೊಂಡಾಡಲು ಪಾಪಶೂನ್ಯ
ನಿನ್ನವನೆನೆ **ವೇಣುಗೋಪಾಲವಿಠಲ**
ಮನ್ನಿಸಿ ಸದ್ಗತಿ ಪಾಲಿಪ ಮುದದಿ ೩

---

ಟಿಪ್ಪಣಿ : ಆನಕದುಂದುಭಿಸುತ – ವಾಸುದೇವನ ಮಗ; ಶ್ರೀಕೃಷ್ಣ

(೯೫)

**ವಾದಿರಾಜರ ಪಾದ ಪದುಮ ಭಜಿಸೋ**
ಮೋದವಾಗ್ವುದು ಮನಸಿಗೆ ಸರ್ವದಾ ಪ

ವಾಗೀಶರ ಪ್ರಿಯ ಕರಸಂಜಾತಾ
ಆಗಮಜ್ಞನಿಪುಣಾ
ತ್ಯಾಗ ವೈರಾಗ್ಯ ಸುಜ್ಞಾನಿಯೆನಿಪ
ಭಾಗವತಾಗ್ರಣಿ ಲಾತವ್ಯ ೧

ಸೋದಾಧೀಶ ಭೂತರಾಜಗುರು
ಸಾಧಿಸಿದನು ಶ್ರೀ ದೇವರ
ಬಾದರಾಯಣ ಪ್ರಿಯ ಭಾವಿಭಾರತಿಪತಿ
ಮೋದಮುನಿಗೆ ಸಮ ೨

ಭೂವರಾಹ ಹಯಾಸ್ಯ ತ್ರಿವಿಕ್ರಮ
ಶ್ರೀಭೂಪತಿ ಶ್ರೀನಿವಾಸನ
ನಾ ಭಕ್ತಿಯಲಿ ನಿತ್ಯ ನಮಿಸುವೆ
ಶ್ರೀ **ಪಂಢರಿನಾಥವಿಠಲನ** ಪ್ರೀಯರ ೩

(೯೬)

**ವಾದಿರಾಜರ ಪಾದ ಮೋದದಿ ಭಜಿಸಿ**
ಮನುಜನೆ ಬಲು ಧನ್ಯನೋ ಪ

ಧ್ರುತ – ಶ್ರೀದನೊಲಿಮೆ ಸುಪಾತ್ರ ದಶಮತಿ ।
ಬೋಧತೀರ್ಥರ ಪಾದ ಸೇವಕ–
ರಾದ ಮಹಸುಸ್ವಾದಿ ಪುರದೊಳು ।
ವೇದ ವಿನುತನ ಸ್ತುತಿಸಿ ಮೋದಿಪ ಅ.ಪ.

ವಾಗೀಶ ಮುನಿಪ ಸದಾಗಮಜ್ಞನ ವರ ।
ವೇಗದಿಂದಲಿ ಫಲಿಸಲು
ಜಾಗು ಮಾಡದೆ ಗೌರಿ ತತ್ಪತಿ ।
ರಾಗ ರಹಿತರು ನಿನ್ನನೊಪ್ಪಿಸೆ ।
ರೋಗಹರ ಹಯವದನ ಪದವನು ।
ರಾಗದಿಂದಲಿ ಭಜಿಪ ಯತಿ ೧

ಶ್ರೀಮನ್ನ್ಯಾಯಾಮೃತ ಸುಧಾದಿ ಜಲನಿಧಿ ।
ಸೋಮನೆನುತ ಶೋಭಿಪಾ
ಆ ಮಹಾ ದುರ್ವಾದಿ ತಿಮಿರ ಸು–

ತಾಮರಸ ಸಖನೆನಿಪ ಸಜ್ಜನ ।
ಸ್ತೋಮಕಾಮಹ ಬೋಧ ಶಾಸವ ।
ಪ್ರೇಮದಿಂದಲಿ ಪೇಳ್ದ ಯತಿವರೆ ೨

ವಿಕ್ರಮೋತ್ಸವಕೆ ತ್ರಿವಿಕ್ರಮ ಮೂರ್ತಿ ಪ-
ರಾಕ್ರಮನಿಂ ತರಿಸೀ
ಚಕ್ರಿಯನೆ ನಿಲಿಸ್ಯುತ್ಸವದಿ ಸುರಪನ ।
ವಿಕ್ರಮದ ಆಳ್ಬಂದು ಕರೆಯಲು ।
ಉತ್ಕ್ರಮಣ ತೊರೆದವರ ಕಳುಹುತ ।
ವಿಕ್ರಮನ ಪದಕೆರಗಿ ನಿಂದ ೩

ನಿಗಮವೇದ್ಯನ ಬಗೆಬಗೆಯಲಿ ಸಂಸ್ಕೃತ ।
ಮಿಗಿಲು ಪ್ರಾಕೃತ ಪದ್ಯದೀ
ಸುಗುಣಮಣಿಮಯ ಮಾಲೆಗಳ ಪ ।
ನ್ನಗನಗೇಶನ ಕೊರಳೊಳರ್ಪಿಸಿ ।
ಚಿಗಿ ಚಿಗಿದು ಆನಂದದಿಂದಲಿ ।
ದೃಗು ಜಲದಿ ಹರಿಪದವ ತೊಳೆದ ೪

ಸುರನದಿ ನದಿಧರರಾದಿ ಸ್ಥಾಪಿಸುತಲ್ಲಿ ।
ಎರಡೆರಡೊಂದು ವೃಂದಾವನವಾ ।
ಸ್ಥಿರಪಡಿಸಿ ಶ್ರೀವ್ಯಾಸ ಸಮ್ಮುಖ ।
ವರ ನರೇಯಣ ಭೂತಬಲದಲಿ
ಇರಿಸಿ **ಗುರುಗೋವಿಂದವಿಠಲನ** ।
ನಿರುತ ಧ್ಯಾನಾನಂದಮಗ್ನ ೫

(೯೭)

**ವಾದಿರಾಜರ ಪಾದ ಮೋದದಿ ಭಜಿಸುವ**
ಸಾಧಕನೇ ಬಲು ಧನ್ಯನೋ ಪ

ಗಾಧಿಸುತ ನುತನ ಅಗಾಧ ಮಹಿಮೆಗಳ
ವೇದಗಳಾಧಾರದಿ ಸಾಧಿಸಿ ಮೆರೆದಂಥ ಅ.ಪ.

ಋಜುಗಣದಲ್ಲಿ ನೆಲೆಸಿ ಲಾತವ್ಯನೆಂದೆನಿಸಿ
ವಾಯು ಅವತಾರಕೆ ಸುಗಮ ಮಾಡಿದ ಗುರು
ತ್ರಿಜಗವಂದಿತನ ಭಜಿಸುವ ತಂಡವ
ನಿಜ ಭಕುತಿಯಲಿ ವಿಶದ ಮಾಡಿದಂಥ ೧

ಯುಕ್ತಿಮಲ್ಲಿಕಾದಿ ಶಕ್ತಿ ಕಾವ್ಯಗಳ ರಚಿಸಿ ಅ-
ವ್ಯಕ್ತನ ಗುಣ ಭಕ್ತಿಲಿ ಬೋಧಿಸಿ
ಇಕ್ಷುಚಾಪನ ಪಿತನ ಈಕ್ಷಿಸಿ ಒಲಿಸಿ ಅಪ-
ರೋಕ್ಷರೆಂದೆನಿಸಿ ಕ್ಷಿತಿಲಿ ಮೆರೆದಂಥ ೨

ಸರ್ವಪಾಲಕ **ಅರವಿಂದನಾಭವಿಠ್ಠಲನ**
ಸರ್ವವ್ಯಾಪಿಯು ಸರ್ವಶ್ರೇಷ್ಠನೆಂದು
ಗರ್ವದಿ ಸಾರಿದ ಸರ್ವರಾಪ್ತಭಾವಿ-
ಸರ್ವಜ್ಞರೆಂತೆಂದು ಊರ್ವಿಲಿ ಮೆರೆದಂಥ ೩

---

ಗಾಧಿಸುತ–ವಿಶ್ವಾಮಿತ್ರ

(೯೮)

ವಾದಿರಾಜರ ಭಜಿಸಿರೋ
ವಾದಿರಾಜರ ಭಜಿಸೆ ಮೋದಮಪ್ಪುದು ನಿಮಗೆ ಪ

ಮೋದಮುನಿ ದರ್ಶನ ಸುಬೋಧವಾಗುವುದಹಿತ
ಬಾಧೆ ತಪ್ಪಿಸಿ ವೇದವಾದೋದಿತನ ಪದ್ಮಪಾದ
ಯುಗ್ಮವ ತೋರುವ ಅ.ಪ

ಪೂವಿನಾಕರದ ದ್ವಿಜದೇವ ರಾಮನು ಗೌರಿ
ದೇವಿಯುದರದಿ ಶಾರ್ವರೀವತ್ಸರದಿ ಮೌನಿ
ದೇವ ವಾಗೀಶರ ಶುಭಾವಹಾಣತಿಯಂತೆ
ಭೂವರಾಹಾಖ್ಯದಿ ಜನ್ಮಿಸೀ
ಕೋವಿದೋತ್ತಮ ಹಯಗ್ರೀವ ಪದಸಂಸಕ್ತ

ಭಾವ ಭವಿಷದ್ವಾಯು ಶ್ರೀ ವಾದಿರಾಜಯತಿ
ಭಾವುಕಾಬ್ಜಾಮಲ ವಿಭಾವನೋದ್ದಾಮ ಕವಿ
ಶ್ರೀವ್ಯಾಸರಲಿ ಓದಿದ ೧

ಸೋದೆಯೊಳು ಶ್ರೀ ಮಾಧ್ವ ವೇದಪೀಠವನೇರಿ
ಸಾಧುಸಂಸೇವ್ಯ ಪ್ರತಿವಾದಿ ನಿಗ್ರಹ ಶೀಲ
ಈ ಧರಾವಲಯ ಮರು ನಾದಗುಡೆ ಕೀರ್ತಿಯ
ಮಹೋದಧಿಯ ಘೋಷದಿಂದ
ಬಾದರಾಯಣರ ಸಿರಿಪಾದದಲಿ ಪಂಚಮೋ
ವೇದಕ್ಕೆ ವ್ಯಾಖ್ಯಾನವಾದ ಲಕ್ಷಾಭರಣ
ಮೋದದಿಂದರ್ಪಿಸಿ ವಿದ್ಯಾಧಿದೇವತೆಯಂತೆ ವಾದ
ದಿಗ್ವಿಜಯ ಮಾಡ್ದ ೨

ಕ್ಷೇತ್ರವೆಲ್ಲವ ತಿರುಗಿ ಸೂತ್ರಾಖ್ಯಸಮಯ ಸ-
ರ್ವತ್ರ ಡಂಗುರ ಹೊಯ್ಸಿ ಪಾತ್ರರಾದವರ ಪರ-
ಮಾರ್ಥ ಸಾಧನೆಗೆ ಗುರುವರ್ಥ ದೀಪಿಕ ಮುಖ ಪವಿತ್ರ
ಸೋಳ ಗ್ರಂಥವ
ತತ್ರಾಪಿ ಕರ್ನಾಟಕ ಭ್ರಾತೃರಿಗೆ ವೇದಾಂತ
ಸೂತ್ರಾರ್ಥ ತಿಳಿಸಿ ಕೃತಾರ್ಥರನು ಮಾಡಲ-
ತ್ಯರ್ಥಪ್ರಸಾದ ಕರವರ್ತಿಸುವ ತೆರದಿ ಹರಿಕೀರ್ತನೆಯ
ಮಾಡಿ ಮೆರೆದ ೩

ವಾಜಿಮುಖನಂಘ್ರಿದ್ವಯ ರಾಜೀವ ಮಧುರಾಜ
ಸೋಜಿಗಾಮಲ ಚರ್ಯ ಭೋಜ ಕುಲಗುರುರಾಜ
ರಾಜಿಸುವ ಶರಣ ಸುರಭೂಜ ಸಕಲ ಸುಕಲಾಭ್ರಾಜಿತ
ಯಶಾಧಿರಾಜ
ಪೂಜಿತ ಮಹಾ ಭೂತರಾಜ ಭೋ ಪರಿವ್ರಾಜ
ಈಜಗತ್ರಯಭಾರಯೋಜನನೆ ಋಜುರಾಜ
ಬೀಜಮಂತ್ರಾರ್ಥ ನಿರ್ವ್ಯಾಜ ಭಕ್ತಿಲಿ ಮುಕ್ತಿಭಾಜನ-
ನೆನಿಸೆನ್ನ ಸಹಜ ೪

ಭೋಗಪುರಿ ರಾಜನ ಕುರೋಗವನು ಕಳೆದು ನೀ
ಭೋಗಿ ಭಯ ಬಿಡಿಸಿಲ್ಲಿಯ ಯೋಗಕ್ಷೇಮವ ಮಾಡಿ
ಯೋಗ ಸಾಮರ್ಥ್ಯದಿಂದ ಘಟನಾಘಟನಗಳ
ಆಗುಮಾಡುತ ಸರ್ವದಾ
ಆಗದವ ಗರಬಡಿಸಿ ಲಾಘವದಲರಗಿಸಿದೆ
ಈಗ ಸಮಯಲ್ಲೆಂದು ಬೇಗ ದೂತರನಟ್ಟಿ
ಭೂಗಗನ ಪಾತಾಳಕಾಗರ ತ್ರಿವಿಕ್ರಮನ ದೇಗುಲ
ದೊಳಿರಿಸಿ ಮೆರೆದೇ ೫

ಕೊಚ್ಚಿ ಕೇರಳ ಚೋಳ ಕಚ್ಛಕ ಕರ್ನಾಟಪುರಿ
ಮಚ್ಛಲೀ ಗಯ ಕಾಶಿ ಉಚ್ಚ ಬದರೀ ಸೇತು
ಸ್ವೇಚ್ಛಾಯಟನದಿಂದುಚ್ಛ್ರಾಯರಾಗಿ ಬಹು
ಮೆಚ್ಚು ಕಾಣಿಕೆ ಪಡೆಯುತಾ
ಸಚ್ಛಾಸ್ತ್ರಪ್ರಣವ ಮಂತ್ರೋಚ್ಚಾರಣೆಯೊಳಖಿಳ
ತುಚ್ಛರನು ಸದೆಬಡಿದು ಸಚ್ಚರಿತ್ರರ ಮಾಡಿ
ಅಚ್ಚ ಸುಖತೀರ್ಥಮತದ್ದೆಚ್ಚಾಳಿಕೆಯ ಮೆರೆಸಿ
ಪ್ರಚ್ಛನ್ನ ಕಲಿಯ ಕೊಂದು ೬

ಉಡುಪಿಯಲಿ ಪರ್ಯಾಯವೇರ್ಪಡಿಸಿ ದಿಗ್ಸಂಚಾರ
ನಡೆವವೊಲು ಸಚ್ಛಿಷ್ಯ ಗಡಣವನು ನಿರ್ಮಿಸಿಕೊಂ-
ಡಡೆಹಾಯ್ವ ಕಷ್ಟಗಳ ಹುಡಿಮಾಡಿ
ಶ್ರೀಕೃಷ್ಣನಡಿದಾವರೆಗಳಲ್ಲಿ
ಬಡಗು ಮೂಡಲು ತೆಂಕ ಪಡುವಲಾಸ್ಯದ ಕಪ್ಪ
ಕಡಗೋಲುಕರನ ಮೆಲ್ಲಡಿಯ ಸೇವೆಗೆ ನಿತ್ಯ
ಸಡಿಲವಾಗದ ಶಿಸ್ತಿನೊಡನೆ ಸಂಸ್ಥಾಪಿಸಿದ ಪೊಡವಿ-
ಜನ ಪೊಗಳುತಿರಲು ೭

ಹರಿಕಥಾಮೃತಲಹರಿ ಎರಡು ದಡ ಮೀರ್ದುದೋ
ಪರಿಪರಿ ಪುರಾಣೋಕ್ತಿ ಕರುಣಾನುಭವವಾಯ್ತೋ
ಸರುವೋಪನಿಷದರ್ಥ ಪುರುಷಾಕೃತಿಯ ತಾಳ್ದು
ನೆರೆಮಾರ್ಗ ತೋರುತಿಹುದೋ

ಅರರೆ ಬ್ರಹ್ಮಜ್ಞಾನ ಗುರುವಾಗಿ ಬಂದಿಹುದೋ
ಸರುವಜ್ಞ ತೀರ್ಥಾರ್ಯರ ಪರಾವತಾರವೋ
ಅರಿಯಲರಿದೆಂದಖಿಳ ಧರಣೀ ಸುರರಚ್ಚರಿಯ
ಶರಧಿಯೊಳಗೋಲಾಡ್ದರು ೮

ಪೂರ್ವೋಕ್ತ ಮಹಿಮೆ ನೂರಾರು ವರ್ಷವು ತೋರಿ
ಶಾರ್ವರೀ ಫಾಲ್ಗುಣದ ಪರ ಮೂರು ಸೋದೆಯಲಿ
ಸರ್ವಜನ ಸ್ತುತಿಸುತಿರೆ ಸರ್ವಲೋಕ
ಶರಣ್ಯಗರ್ಪಿಸಿದನ್ನೈ ದೇಹವ
ಊರ್ವಿಯುದಯದಿ ಭಕ್ತಿಪೂರ್ವಕೀಪದ ಪಠಿಸೆ
ದುರ್ವಿಭಾವ್ಯನು **ತಂದೆವೆಂಕಟೇಶವಿಠ್ಠಲನು**
ಸರ್ವಾರ್ಥಪ್ರದನಾಗಿ ನಿರ್ವಾಹ ಮಾಡುವನು ಉರ್ವ
ಭವ ಬಂಧದಿಂದ ೯

(೯೯)

**ವಾದಿರಾಜ ಸುರರಾಜ ತಾನಾದರೆ**
**ಮೇದಿನಿಯೊಳಗಿಹನ್ಯಾಕೆ?** ಪ

ಮೇದಿನಿ ಸುರರಿಗೆ ಮೋದ ಕೊಡೋದಕೆ
ಸ್ವಾದಿಯೊಳಗೆ ನಿಂತಿಹನದಕೇ ಅ.ಪ.

ಋಜುಗುಣದೊಡೆಯನು ತ್ರಿಜಗಾಧೀಶನು
ಭುಜಗಾಂಚಿತನಾದ್ಯಾಕೆ?
ಭಜಿಸುವ ಜನ ಭೂಭುಜ ತಾನೆನಿಸಿ
ಅಜನ ಪದ ತಾ ಸೇರೋದಕೆ ೧

ಸುರತತಿ ಸನ್ನುತ ಸರಸಿಜಭವ ಪದ
ಕರಹನು ನರನ್ಯಾಕಾದಾ?
ಧರೆಸುರರಿಗೆ ತನ್ನ ಕರುಹನು ತಿಳಿಸೀ
ಪರಿಪರಿ ಮಹಿಮೆಯ ತೋರಿಸಿದ ೨

ವೀತಭಯನು ತಾನೀತೆರ ಜಗದಿ
ಯಾತಕೆ ಯತಿಯಾದ ?
ದಾತ **ಗುರುಜಗನ್ನಾಥವಿಠಲ** ಗುಣ
ಖ್ಯಾತಿಯ ತಾ ಮಾಡಿದ ೩

(೧೦೦)

**ವಾದಿರಾಜಾ ನಿಜ ಮೋದ ನೀಡುವ ತವ**
**ಪಾದವ ತೋರಿಸಯ್ಯ ಹೇ ಜೀಯ** ಪ

ವೇದವೇದ್ಯ ಯತ್ಯಾರಾಧಿತ ಸುಜನೋದ್ಧಾರ
ಮಾಡಿದ ಪಾದವೋ ಗುರುರಾಯ
ಮೇದಿನೀಸುರರಿಗೆ ಸಾದರದಿಂದಲಿ
ಬೋಧ ನೀಡಿದ ಪಾದವೋ ಮಹರಾಯ ೧

ವಂಧ್ಯ ಸತೀಜನಕೆ ಸಂದೇಹ ಮಾಡದೆ
ಕಂದರ ಕೊಟ್ಟ ಪಾದವೋ ಯತಿರಾಯ
ಮಂದ ಭಾಗ್ಯಗೆ ಭಾಗ್ಯ ಸಂದೋಹ ದಿನ ದಿನಾ
ಮಂದ ನೀಡಿದ ಪಾದವೋ ಸುರನಾಥ ೨

ನಷ್ಟನಯನ ಮಹಕುಷ್ಠಿ ಜನರ ನಿಜ
ಇಷ್ಟ ನೀಡಿದ ಪಾದವೋ ಮಹರಾಜ
ಕಷ್ಟ ಬಡುವ ಸುಜನಾನಿಷ್ಟ ಕಳೆದು ಸರ್ವೋ-
ತ್ಕೃಷ್ಟರೆನಿಸಿದ ಪಾದವೋ ಹೇ ಪ್ರಭುವೆ ೩

ಎಲ್ಲರ ಮನೋರಥ ನಿಲ್ಲದೆ ಸರ್ವದಾ
ಸಲ್ಲಿಸಿರುವ ಪಾದವೋ ಕರುಣಾಳೋ
ಫುಲ್ಲಲೋಚನ ಮಮ ಬಲ್ಲಿದ ಮನೋರಥ
ಸಲ್ಲಿಸದಿರಲೇನೋ ಪಾದ ಶ್ರೀಕರ ೪

ಪಾತಕ ಪರಿಹಾರ ಅನಾಥ ರಕ್ಷಕ
ಭಾವಿ ವಿಧಾತ ಪಾದವೋ ಹೇ ತಾತ

ದಾತ **ಗುರುಜಗನ್ನಾಥವಿಠಲ** ನಿಜ
ದೂತನ ಶುಭ ಪಾದವೋ ಮನ್ನಾಥಾ ೫

(೧೦೧)

ವಾಸುದೇವನ ದಾಸ ವಾಸುಕೀ ಭರಣ ಭೂಷಾ ಪ

ವಾಸವಾದ್ಯಮರರಿಗೆ ತೋಷವ ಸುರಿಸುವ ಭಾವಿ
ಭಾರತೀಶ ಅ.ಪ

ಬಯಸಬಾರದ ಬಯಕೆಗಳಿಂದ ಬಾಧೆಗೊಳಗಾದೆನೋ
ಬಾಧೆಗಳ ಬಿಡಿಸಿ ಭವದಿ ಭಕ್ತರೊಳು ಕೂಡಿಸೋ ೧

ಕೊಟ್ಟವರ ಸಾಲವನು ಕೊಟ್ಟು ಮುಟ್ಟಿಸದೆ
ದಿಟ್ಟತನದಿ ಬೆಂಬಿಟ್ಟು ಅಗಲದಲಿಟ್ಟು
ಕೊಟ್ಟು ತೀರಿಸುವಂತೆ ಮಾಡೊ ಪ್ರೇಷ್ಟಾ ೨

ಏಸೇಸು ಕಲ್ಪಕ್ಕು ದಾಸನೆಂಬುದ ಬಲ್ಲೆ
ಈಶನೇ ಗತಿ ಎಂಬುದನ್ನು ಚೆನ್ನಾಗಿ ನಾ ಬಲ್ಲೆ
ಕಾರಣದಿ ಮೊರೆಹೊಕ್ಕೆ ತಂದೆ **ವರದ-**
**ಗೋಪಾಲವಿಠಲನ** ಶರಣಾಗ್ರೇಸರಾ ೩

(೧೦೨)

**ವ್ಯಾಧಿಯನು ಪರಿಹರಿಸು ಗುರು ವಾದಿರಾಜಾ** ಪ

ಸಾಧುಗಳ ಸಲಹುವ ಶ್ರೀಮಧ್ವಾವಿಸಮೀರ ಮಹಾರಾಜ ಅ.ಪ

ಬಂಧುಗಳು ಎನಗಿಲ್ಲ ಬದುಕಿನೊಳು ಸುಖವಿಲ್ಲ
ಬಂದು ಮಾತನಾಡುವರಂತು ಮೊದಲಿಲ್ಲ
ತಂದೆ ತಾಯಿಯು ನೀನೆ ಬಂಧುಬಾಂಧವ ನೀನೆ
ಇಂದೆನ್ನ ಕುಲದೈವ ಮಮಸ್ವಾಮಿ ನೀನೆ ೧

ಬೆಂದೆನೋ ಸಂಸಾರ ಶರಧಿಯೊಳು
ನೊಂದೆನೋ ಮನದ ತಾಪದಿಂದಾ
ಕಂದಿ ಕುಂದಿ ಬೆಂಡಾದೆನೋ ಭವದೊಳಗೆ
ಇಂದೆನ್ನ ಕಾಯೋ ಕರುಣಾಳು ಗುರುವರ ಪ್ರಭುವೆ ೨

ತನುವಿನಲಿ ಉಲುಹಿಲ್ಲ, ಮನಸಿನಲಿ ದೃಢವಿಲ್ಲ.
ಕನಸಿನಲಿ ಕಳವಳಿಸುವೆನಲ್ಲಾ
ರೋಸಿ ವಿಷಯಗಳನ್ನೆಲ್ಲ ದೋಷರಹಿತ ನಮ್ಮ
**ಕಾಳಿಮರ್ದನಕೃಷ್ಣನ್ನ** ತೋರಿಸು ದಯಪಾಲಿಸು ೩

(೧೦೩)

**ವಿಜಯಪ್ರದ ವಾದಿರಾಜ ಜಯ** ಪ

ವಿಜಯಪ್ರದ ವಾದಿರಾಜ ಋಜುಗಣ
ಸ್ವಜನ ಮುದಿತ ಸಮಾಜ ಅ.ಪ

ಸಾಧು ಸಮರ್ಥಿತ ಸೋದಾಧಿಷ್ಠಿತ ಸ್ವ-
ಪಾದ ಮಹಿಮ ಅಗಾಧಾ ೧

ವೃಂದಾರಕ ಸಹ ವೃಂದಾವನರತ
ವಂದಿತಾಶ್ರಿತಜನವೃಂದಾ ೨

ಕಂಜಜ ಭವ ಪ್ರಭಂಜನ ಹರಯುತ
ರಂಜನೀಯ ಪದಮುಂಜಾ ೩

ತಾರಕ ವೃಂದಾವನ ವರ ಮೃತ್ತಿಕಾ
ಸೇವಕ ಮೌನ ಸ್ವಭಾವ ೪

ತಾರಕ ವೃಂದಾವನ ವರ ಮೃತ್ತಿಕಾ
ಸೇವಕ ಮೌನ ಸ್ವಭಾವ ೫

ರಮತು ಮನ್ಮನ ಸ್ವತ್ವದ ಕಮಲಾಂಘ್ರ್ರಿ
ಶಮಿತಕಲಿ ಮಲಸ್ಥೋ ೬

ನಾನ್ಯಂಯಾಚೇಹ್ಯನನ್ನ ಭಕ್ತಿಂ
ಧನ್ಯ ತ್ವಯಿ ಸನ್ಮಾನ್ಯ ೭

ಅಂಬುಜ ಕರಾವಲಂಬಂ ದೇಹಿ
ಹ್ಯಂಬುಜಾಕ್ಷ ಪ್ರತಿಬಿಂಬಂ ೮

ಸಾಮಗಪ್ರಿಯ ಶ್ರೀರಾಮವಿಠಲ ಪದ
ಪ್ರೇಮಾಸ್ಪದ ನಿಸ್ಸೀಮ ೯

---

ಟಿಪ್ಪಣಿ : ಈ ಕೃತಿಯಲ್ಲಿ ಬರೀ ಸಂಸ್ಕೃತ ಪದಗಳೇ ಇವೆಯಾದರೂ ಕನ್ನಡದ ಲಯವಿದೆ.

(೧೦೪)

**ಶರಣು ಪೊಕ್ಕೆ ಮೊರೆಯ ಕೇಳೊ ಪರಮ ಕರುಣನಿಲಯ ನಿನ್ನ**
**ಚರಣ ಕಮಲಯುಗಕೆ ನಮಿಪೆ ಕರುಣಿಸೆನ್ನನು** ಪ

ವಾದಿರಾಜ ಗುರುವೆ ನಿನ್ನ ಪಾದಯುಗಳದಲ್ಲಿ ನಿತ್ಯ
ಆದರಾತಿಶಯವನಿತ್ತು ಮೋದ ಬಿಡಿಸಯ್ಯಾ
ಸ್ವಾದಿನಿಲಯ ಮನದ ವಿಷಾದ ಕಳೆದು ಮೋಹಭವದ
ಖೇದ ಕೊಡುವ ಮಹತ್ತಾದ ಬಾಧೆ ಬಿಡಿಸಯ್ಯಾ ೧

ದೇವ ಸ್ತೋಮ ವಂದ್ಯ ನಿನ್ನ ಸೇವೆಗಾಗಿ ಬಂದ ಎನ್ನ
ಭಾವ ತಿಳಿದು ಶೀಘ್ರ ಫಲವ ಭಾವಿಸುವುದು ಕೋವಿದಾಢ್ಯ
ದೇವ ದೇವ ನಿನ್ನ ಬಿಟ್ಟು ಆವ ದಾತನಿಲ್ಲವೆಂದು
ಭಾವದಿಂದ ಭಜಿಪೆನಯ್ಯ ಭಾವಿಧಾತನೇ ೨

ಸೀತರಮಣಗುರುಜಗನ್ನಾಥವಿಠಲ ಪಾದಪದುಮ
ದೂತನೆನಿಸೆ ಖ್ಯಾತನಾಗಿ ಮಾತೆ ಜನಕರಂತೆ ನಿತ್ಯ

ದೂತಜನರ ಪೊರೆವೊ ಗುರುವೆ ಪ್ರೀತನಾಗಲೊಲ್ಯಾ ಸ್ವಾಮಿ
ದೂತ ನಾನು ನಿನಗೆ ಎನ್ನ ಮಾತು ಲಾಲಿಸೋ ೩

(೧೦೫)

**ಶರಣು ಪೊಕ್ಕೆನೋ ನಿನ್ನ ಕರುಣಾಸಾಗರಾ** ಪ

**ಶರಣು ಪೊಕ್ಕ ಚರಣಯುಗಕೆ ಕರುಣಿಸೆನ್ನ ಶರಣನೆಂದು**
ಗುರುವೇ ತ್ವರದಿ ಪೊರೆಯೊ ಸ್ವಾದಿ -
ಧ್ವರಿಯೆ ಕರವ ಪಿಡಿದು ನಿರುತ ಅ.ಪ.

ಎನ್ನ ಬಿನ್ನಪ ಕೇಳೋ ಅಪನ್ನಪಾಲಕಾ
ಘನ್ನ ಮಹಿಮ ನಿನ್ನ ಬಿಟ್ಟರೆನ್ನ ಪಾಲಕರಿನ್ನು ಇಲ್ಲ
ಘನ್ನ ಜ್ಞಾನವಿತ್ತು ಮುನ್ನ ಮನ್ನಿಸೋ ಯತಿರನ್ನನೇ ೧

ತಾತನೆಂದೆನೋ ಎನ್ನ ಮಾತು ಲಾಲಿಸೋ
ದಾತ ನಿನ್ನ ಪೋತ ನಾನು ಮಾತು ಕೇಳನಾಥ ಪೇಳ್ವೆ
ಪ್ರೀತ ಮನದಿ ಭೀತಿ ಬಿಡಿಸಿ ದೂತನೆನಿಸೊ
ಖ್ಯಾತ ಮಹಿಮನೆ ೨

ಪರಮ ! ಕರುಣಿಸೋ ನಿನ್ನ ಶಿರದಿ ನಮಿಸುವೆ
ಸರಸಪಾದಸರಸಿರುಹಕೆ ಎರಗಿ ಅರಿಕೆ ಮಾಡಿದ್ಯನ್ನ
ಪರಿಯ ತಿಳಿದು ಪೊರೆಯೋ ಸ್ವಾಮಿ
ಸರಸ **ಗುರುಜಗನ್ನಾಥವಿಠಲ** ದೂತ ೩

(೧೦೬)

**ಶರಣು ವಾದಿರಾಜ ಗುರುವೆ ಶರಣು ವಾಜಿವಕ್ತ್ರಪ್ರಿಯನೆ**
ಶರಣು ನಂದಮುನಿಯ ಅನುಜ ಶರಣು ಭಾವಿ
ಮುಖ್ಯಪ್ರಾಣನೆ ಪ

ದುರಿತರಾಶಿ ತರಿದು ಎನ್ನ ಭರದಿ ಕರುಣ ತೋರಿ ನಿನ್ನ
ಚರಣಭಕ್ತರಲ್ಲಿ ಮುನ್ನ ಇರಿಸಿ ಸಲಹೊ ಕರುಣಶರಧಿಯೆ ಅ.ಪ.

ಘೋರ ಕಲಿಯು ಬಂದನೆಂದು ಸಾರಿ ಹರಿಯ ಮುಂದೆ ನಿಂದು
ಸೇರಿ ಸ್ತುತಿಸೆ ದಿವಿಜವೃಂದ ಧೀರ ಲಾತವ್ಯ ಬಂದೆ ಹಾ!
ಚಾರು ಯುಕ್ತಿಮಲ್ಲಿಕಾದಿ ಸಾರಗ್ರಂಥರಾಶಿ ಇತ್ತು
ಈರಮತವ ಮೆರೆಸಿ ಮೆರೆದ ಶೂರ ನಿನ್ನ ಪೊಗಳಬಲ್ಲೆವೆ ೧

ಎರಡು ಹತ್ತು ಮೇಲೆ ನೂರುವರುಷ ಪೊರೆದು ಶಿಷ್ಯಸಂಘ
ತೊರೆಯದೇನೆ ಕಾಯ ಕುಳಿತೆ ಭರದಿ ವೃಂದಾವನದಲೀ
ತೊರೆಯಲಾಗದೇನೆ ನಿನ್ನ ತುರಗವದನ ರಾಮಕೃಷ್ಣ
ಅರವಿದೂರ ವೇದವ್ಯಾಸ ಪೊರೆವರೆಲ್ಲ ಸೇವೆಕೊಳ್ಳುತ ೨

ಹನುಮ ಭೀಮ ಮಧ್ವ ಹಾಗೆ ಗಣಪನ್ಯೆಯ್ಯ ಸುರರು ಎಲ್ಲ
ಮಣಿದು ಕುಣಿದು ನಿನ್ನ ಸಹಿತ ಮಣಿದು ಹರಿಯ ಭಜಿಸುತಿಹರು
ತನುವ ಕೆಡಹಿ ರಾಗದಿಂದ ನೆನೆದು ನಿನ್ನ ನೋಡೆ ಸದನ
ಜನುಮ ಜನುಮ ದೋಷ ಕಳೆವ ಘನ ಮಹಾತ್ಮೆಗೀಡು ಕಾಣೆ ೩

ಎರಡು ಕಮ್ಮಿ ಎರಡು ನೂರು ವರವಿರಂಚಿ ಕಲ್ಪಗಳಲಿ
ತೊರೆದು ಕಾಮ ಹರಿಯ ಯಜಿಸಿ ಮೆರೆವ ನಿಮ್ಮ ಮಹಿಮೆಗೇನೆಂಬೆ
ಸುರರು ವಿವಿಧ ಬಲಿಗಳಿತ್ತು ಚರಣ ಪಿಡಿದು ನಡೆವರೆನಲು
ನರನು ಪೊಗಳಬಲ್ಲನೇನು ಹರನ ಗುರುವೆ ಶಿರವ ಬಾಗುವೆ ೪

ವರವಿಮಾನದಲ್ಲಿ ಕುಳಿತು ಚರಿಸುತಿರಲು ಒಮ್ಮೆಯೇನೆ
ಸುರರು ಎಲ್ಲ ಕರೆಯೆ ನಿನ್ನ ಧರಿಸಿ ರೂಪ ನಿಚಯ ನಡೆದೆಯಾ
ವರವಿಶೇಷ ಪೂಜೆಕೊಂಡು ಸ್ಥಿರವಗೈದು ಪದವಿಗಳನು
ಕರೆದು ಹರುಷ ದಿವಿಜಗಣಕೆ ಪೊರೆದ ನಿನಗೆ ತುಲ್ಯ ಕಾಣೆವೈ ೫

ಸಿರಿಯ ಪತ್ರ ಹರಿಗೆ ಇತ್ತು ಮರುತನಂತೆ ಪಡೆದು ವರವ
ದುರಳ ಚೈವ ಕೊಡಲು ಶಾಪ ಹರುಷದಿಂದ ಕೊಂಡು ಭುವಿಯಲಿ
ಧರಿಸಿ ನಿಂದು ದಂಡ ಕಾಷ್ಠ ದುರುಳವಾದಿಗಜಗಳಳಿದು
ಚರಿಸಿ ದೇಶವೆಲ್ಲ ಕೊನೆಗೆ ಕುರುಹು ತೋರಿ ನಿಂತ ಸ್ವಾದಿಲಿ ೬

ಏನು ನಿಮ್ಮ ಮಹಿಮೆ ಗುರುವೆ ತಾನೆ ಬಂದು ವಾಜಿವದನ
ಸಾನುರಾಗದಿಂದ ಕೊಂಬ ಹೂರ್ಣಭಕ್ಷ್ಯವೆಲ್ಲ ಪೂರ್ಣ
ಪೂರ್ಣ ನೀನು ಜೀವಗಣದಿ ಪೂರ್ಣತನ್ನ ಕಂದನೆಂದು
ದಾನಗೈದ ನಿನ್ನ ಸತಿಗೆ ಜ್ಞಾನಪೂರ್ಣಬಲನು ನೀನಹೋ! ೭

ಸೇರಿ ಇಹರು ಬ್ರಹ್ಮವಾಯು ಚಾರು ಭ್ರಾತೃನಿನ್ನ ಬದಿಲಿ
ಮೀರಿ ಇಹುದು ಯಾವುದಿಲ್ಲ ಮೂರು ಜಗದಿ ಸತ್ಯ ಸತ್ಯವೋ
ಮೂರು ಕಣ್ಣಿನಾತ ಮುಂದೆ ಭಾರಿಭೂತರಾಜ ನಿಮ್ಮ
ಸಾರ ಚರಣ ಪಿಡಿದು ಭಜಿಪ ಯಾರು ಸಾಟಿ ಇಲ್ಲ ಸಾರುವೆ ೮

ಗಂಗೆ ಮೊದಲು ಎಲ್ಲ ತೀರ್ಥ ತಂಗಿ ಧವಳಗಂಗೆಯಲ್ಲಿ
ತುಂಗ ಮಹಿಮ ನಿನ್ನ ಯಜಿಸಿ ಹಿಂಗಿಸುವರು ತಮ್ಮ ಶಮಲ
ಕಂಗಳಿಂದ ನೋಡೆ ಕೇಳೆ ಭಂಗ ಸತ್ಯ ಸರ್ವಪಾಪ
ಅಂಗವದ್ದಿ ಭಜಿಪ ನರಗೆ ರಂಗ ಒಲಿವ ಸುರರು ಕೈವಶ ೯

ನಿನ್ನ ನಿಲಯ ಸುತ್ತ ನೃತ್ಯವನ್ನು ಗೈದು ಭಜಿಸೆ ಹರಿಯ
ಘನ್ನ ಜ್ಞಾನ ಚೆನ್ನ ಪಡೆದು ಸನ್ನುತಾಂಗನೆಡೆಯ ಕಾಣುವ
ಅನ್ನಸತ್ರ ನಿನ್ನ ಕ್ಷೇತ್ರ ಅನ್ನಪತಿಯ ತೋರ್ಪ ನಿನಗೆ
ಇನ್ನು ಸರಿಯೆ ಕಾಮಧೇನು ಚಿಣ್ಣನೆಂದು ಪಿಡಿಯೊ
  ಶರಣನ ೧೦

ಹತ್ತು ಐದು ನಾಲ್ಕು ಆರು ಹತ್ತು ಐದು ಸಹಿತ ಒಂದು
ಹತ್ತು ಹತ್ತು ಮತ್ತೆ ಒಂದು ಹತ್ತು ನೂರು ಹಾಗನಂತ
ಸುತ್ತ ಪಂಚನಿಲಯಗಳಲಿ ನಿತ್ಯ ಧೊರೆಯ ರೂಪಗಳನು
ನಿತ್ಯನುತಿಪೆ ಬೃಹತಿಯಿಂದ ಸತ್ಯಪದವಿ ಸಿದ್ಧ ನಿನಗೆಲ್ಲೆ ೧೧

ಗಿರಿಗಳರಸು ಮಗಳ ಸಹಿತ ಕರೆದು ನಿಮ್ಮ ರತ್ನರಾಶಿ
ಸುರಿದು ಶಿರದಿ ಪೂಜೆಗೈದು ಪರಮ ಧನ್ಯನಾದ ತಾನಹೋ!
ತರಣಿ ಜನರು ಮಾರ್ಜನಾದಿ ಪರವಿಶೇಷ ಸೇವೆಗೈದು
ಹರುಷದಿಂದ ಹಾಡಿ ನಮಿಸೆ ದೊರೆಯ ಕೊಡುವೆ
  ಕಾಮಿತಾರ್ಥವ ೧೨

ದೀಪಸಾಲು ಹಚ್ಚಿ ಭಜಿಸೆ ಪೋಪುದ್ಯೆಯ್ಯ ಭವದ ತಾಪ
ಆ ಪರೇಶ ಒಲಿದು ಜ್ಞಾನ ದೀಪವಿಡುವ ಹೃದಯಕಮಲದಿ
ಕೋಪ ತಾಪ ದೂರನಾಗಿ ಶ್ರೀಪತಿಯ ದಾಸನಾಗಿ
ಲೇಪ ರಹಿತನಾಗಿ ಭವದ ಕೂಪ ದಾಟ ಪೋಪ
ಬೇಗ ಹೋ! ॥೩

ಯಮನ ಪುರವ ಸಾರಿ ನೀನು ವಿಮಲರೂಪ ತೋರಿ ಹಾಗೆ
ಅಮರ ಜ್ಞಾನ ಬೋಧೆಯಿತ್ತು ಯಮನ ರಾಜ್ಯ ಬರಿದುಗೈದೆಹೊ
ಕಮಲೆಕಂದ ಕಾಮಕೊರಗಿ ನಮಿಪ ನಿನ್ನ ರೂಪ ನೋಡಿ
ಶ್ರಮವು ಆಯ್ತು ಕಾಮನಿಂದ ಅಮರಸ್ತ್ರೀವೃಂದಕೆಲ್ಲ ವೈ ॥೪

ದುಃಖಕೊಡದ ನಿನ್ನ ಅಸ್ಥಿ ಶಂಖಚಕ್ರ ಮಯವು ಹೌದು
ಪಂಕಜಾಕ್ಷ ಅಂಗದಲ್ಲೆ ಅಂಕೆರಹಿತ ಸುಖವು ನುಂಬೆ ಹೋ!
ಟೊಂಕದಿರುವ ಸೂತ್ರ ತಾನು ಕಿಂಕಿಣೀ ಸುರಾವದಿಂದ
ಶಂಕೆ ಕೊಡದೆ ಸಾರುತಿಹನು ಬಿಂಕವಾಗಿ ಪದವಿಬರ್ಪುದ ॥೫

ಮೇರುಗಿರಿಯ ಶಿಖರದಲ್ಲಿ ಕ್ರೂರಮದನ ತಾಪದಿಂದ
ಚಾರುಕನ್ಯೆಯೊಬ್ಬಳಿನ್ನು ತೋರೆ ಸ್ವಾಂಗ ನಿನ್ನ ಬಯಸುತ
ಧೀರನೀನು ಕದಲದಿರಲು ಕ್ರೂರ ತಪದಿ ಹರಿಯ ಒಲಿಸಿ
ನೀರೆ ಪಡೆದ ಲೈಯ ನಿನ್ನ ಸೇರಿ ಸುಖಿಪ ಭಾಗ್ಯ ಮುಂದಕೆ ॥೬

ಗರುಡನೇರಿ ನಿನ್ನ ಸಹಿತ ಹರಿಯು ತೋರಿ ಸಕಲಲೋಕ
ತರಿಸಿ ಅಮೃತ ಕರದಿ ಕುಡಿಸಿ ಅರವಿ ದೂರ ನಿನ್ನ ತಬ್ಬಿದ
ಮರುತನಂತೆ ವ್ಯಾಜರಹಿತ ಚರಣಭಜರ ನಿನಗೆ ತಾನೆ
ಕರೆದು ಕೊಟ್ಟ ವಾಯುಪದವಿ ತುರಗವದನ ಪ್ರಥಮ
ಭಕ್ತ ಹೋ! ॥೭

ಗೆದ್ದು ವೀರಶೈವಗುರುವ ಗದ್ದುಗೆಯನು ಏರಿ ಮೆರೆದೆ
ಮೆದ್ದು ಗರವ ಸುಖದಿ ನಿಂದೆ ತಿದ್ದುಪಾಟು ತೋರ್ದೆ ಉಡುಪಿಲಿ
ಬದ್ಧನಾದ ವಿಠಲ ನಿನಗೆ ಬಿದ್ದ ನೃಪನ ಗೇಸಿ ಕಾಯ್ದೆ
ಶುದ್ಧ ವಿಷ್ಣುಭಕ್ತಿ ತೋರಿ ಮಧ್ವಸುತರ ಪೊರೆದ
ದಾನಿ ಹೋ! ॥೮

ನೂರುನೂರು ಆನೆಮೀರಿ ಭಾರಿಬಲದ ಮೆರೆವ ಶಕ್ತ
ನೇರ ನಿಲಿಸಿ ಧ್ವಜದ ಸ್ತಂಭ ದೂರಗೈದೆ ಶಿಷ್ಯಕಳವಳ
ಭಾರ ಹೌರ ಸ್ಥೂಲಸೂಕ್ಷ್ಮ ತೋರಬಲ್ಲೆ ಇಚ್ಛೆಯಂತೆ
ಮೇರೆ ಇರದ ಮಹಿಮನೆಂದು ಸಾರಿಸಾರಿ
ನುತಿಪೆ ಜೀಯನೆ ೧೯

ಗಂಗೆ ಪಡೆದ ರಂಗನನ್ನು ಅಂಗನಿಂದ ತರಿಸಿ ನೆಟ್ಟು
ತುಂಗವಿಭವದಿಂದ ಯಜಿಸಿ ಕಂಗಳಿಂದ ನೋಡಿ ಉತ್ಸವ
ಅಂಗ ಮರೆತು ನಂದ ಕುಡಿದೆ ಸಂಗದಿಂದ ಕಂಡ ಜನಕೆ
ಭಂಗವಾಯ್ತು ಸಕಲ ಬಂದ ಕೊಂಗಿ ಖಳರ ಬಿಟ್ಟು ಸತ್ಯವ್ರೆ ೨೦

ಬರಿಯ ಕವನವಲ್ಲ ಕೇಳಿ, ಗುರುವೆ ದ್ವಿಜನ ಸ್ವಪ್ನದಲಿ
ಅರುಹಿ ತನ್ನ ಚರಿತೆಯನ್ನು ಬರೆಸಿ ಇಹನು ಪೊರೆಯೆ ಶಿಷ್ಯರ
ಅರಸಿ ನೋಡಿ ಧನ್ಯರಾಗಿ ಒರೆಸಿ ಕಾಮಕ್ರೋಧವೆಲ್ಲ
ಚರಣಪಿಡಿಯೆ ಭಕ್ತಿಯಿಂದ ಗುರುವು ಬಿಡನು
ನಿಮ್ಮನೆಂದಿಗು ೨೧

ಸುಧೆಯ ಕರ್ತ ಜಯಮುನೀಂದ್ರ ಹೃದಯವಾಸಿ ವಾಯುವಂದ್ಯ
ಪದುಮೆ ರಮಣ ಕೃಷ್ಣವಿಠಲ ಸದರದಿಂದ ಮುಕ್ತಿ ನೀಡುವ
ಮುದದಿ ವಾದಿರಾಜ ಹೃದಯ ಸದನ ವಾಜಿವಕ್ತ್ರಗೆರಗಿ
ಬದರಿನಿಲಯನನ್ನ ನೆನೆದು ಪದವನಿದನು ಪಠಿಪ ಭಕ್ತಗೆ ೨೨

(೧೦೭)

**ಶರಣು ಶರಣಯ್ಯಾ**
**ಶರಣು ಶ್ರೀ ಗುರುವಾದಿರಾಜಗೆ** ಪ

ಶರಣು ಸುರಗಣ ಮಾನ್ಯಗೆ
ಶರಣು ಶರಣರ ಪೊರೆವ ಕರುಣಿಗೆ
ಶರಣು ಹರಿಗುಣಲೋಲಗೆ ಅ.ಪ.

ಮಧ್ವಮತಶುಭವಾರ್ಧಿಚಂದ್ರಗೆ
ಸಿದ್ಧಸಾಧನ ಮೂರ್ತಿಗೆ
ಬದ್ಧ ಶ್ರೀಹರಿ ದ್ವೇಷಿಮಾಯಿಗಳ
ಗೆದ್ದ ಹಯಮುಖ ದಾಸಗೆ ೧

ನಿತ್ಯ ನಿರ್ಮಲ ನಿಗಮ ಸ್ತೋತ್ರಗೆ
ಭೃತ್ಯಪಾಲಕ ಸುಗುಣ ಗಾತ್ರಗೆ
ಸತ್ಯಲೋಕಕೆ ಮುಖ್ಯ ಪಾತ್ರಗೆ
ಸ್ತುತ್ಯಯತಿವರ ಸುಜನ ಮಿತ್ರಗೆ ೨

ಮೋದದಾಯಕ ಭೇದಸಾಧಕ
ಸ್ವಾದಿ ಕ್ಷೇತ್ರಕಧೀಶಗೆ
ವೇದವೇದ್ಯಯತೀಶ ತಾತಗೆ
ಆದಿ **ಗುರುಜಗನ್ನಾಥವಿಠಲಗೆ** ೩

(೧೦೮)

**ಶರಣು ಶರಣು ವಾದಿರಾಜ ಶರಣ ಜನಕೆ ಕಲ್ಪ ಭೂಜ** ಪ

ಧರಣಿ ಸುರವರಾದಿ ಪೂಜಿತ ಚರಣ ಪಂಕಜ ಭವ್ಯತೇಜ ಅ.ಪ.

ಯೋಗಿವರ ವಾಗೀಶ ಕುವರ
ಬಾಗಿ ನಮಿಸಿ ಮುಗಿಯುವೆ ಕರವ
ಭೋಗ ರಾಗ ದೂರ ಧೀರ
ಭಾಗವತ ಕುಲಾಬ್ಜ ಭಾಸ್ಕರ ೧

ಸರಸ ಕವಿತಾ ಸಿರಿವಿಲಸಿತ
ಪರಿಪರಿ ಸದ್ಗ್ರಂಥ ರಚಿತ
ವರಕವೀಂದ್ರ ಕೀರ್ತಿಸಾಂದ್ರ
ಪರಮ ಕಟಾಂಬುಧಿಚಂದ್ರ ೨

ಶ್ರೀಶ ಶ್ರೀ ಹಯಾಸ್ಯ ಚರಣ
ದಾಸಕವಿ ಜನಾವಳಿ ಭೂಷಣ
ಭಾಸುರಾಗ ಪಾಲಿಸು ಕರಿಗಿ-
ರೀಶನ ಚರಣ ಕಮಲ ಚರಣ ೩

(೧೦೯)

ಶರಣು ಹೊಕ್ಕೆನು ನಿನ್ನ ಕರುಣಸಾಗರಾ ಪ

ಶರಣು ಹೊಕ್ಕೆ ಚರಣಯುಗಕೆ
ಕರುಣಿಸೆನ್ನ ಶರಣನೆಂದು
ಗುರುವೇ ತ್ವರಿತದಿ ಪೊರೆಯೋ ಸೋದೇ-
ಧೊರೆಯ ಕರವ ಪಿಡಿದು ನಿರುತ ಅ.ಪ.

ಎನ್ನ ಬಿನ್ನಪವ ಕೇಳಾಪನ್ನಪಾಲಕ
ಘನ್ನ ಮಹಿಮ ನಿನ್ನ ಬಿಟ್ಟನ್ಯಪಾಲಕರಿಲ್ಲ-
ವೆನ್ನುವದನು ಇತ್ತು ಚೆನ್ನಾಗಿ
ಮನ್ನಿಸೋ ಯತಿರನ್ನನಿಂದು ೧

ತ್ರಾತನೆಂದೆನೋ ಎನ್ನ ಮಾತು ಲಾಲಿಸೋ
ದಾತ ನಿನ್ನ ಪೋತ ನಾನು ಮಾತ ಕೇಳನಾಥಯ್ಯ
ಪ್ರೀತಿ ಮನದಿ ಭೀತಿ ಬಿಡಿಸಿ....
ದೂತನೆನಿಸೋ ಖ್ಯಾತ ಮಹಿಮ ೨

ಗುರುವೆ ಕರುಣಿಸೋ ನಿನ್ನ ಶಿರಸಾ ನಮಿಸುವೆ
ಸರಸಪಾದ ಸರಸೀರುಹಕೆರಗಿ ಹರಕೆ ಮಾಡಿದೆನ್ನ
ಪರಿಯ ತಿಳಿದು ಪೊರೆಯೊ ಸ್ವಾಮಿ
ಸರಸ ಗುರುಜಗನ್ನಾಥವಿಠ್ಠಲ ೩

(೧೧೦)

ಶ್ರೀ ವಾದಿರಾಜ ಪಾಲಿಸೋ ನೀ ಎನ್ನ ಪ

ಸೇವಿಪ ಹರಿಪದ ಭೂವರಾಹಾರ್ಚಕ ಅ.ಪ

ನಿನ್ನನೊಮ್ಮೆ ಸ್ಮರಿಸಲು ಮುನ್ನಿನ ಪಾಪಗಳೆ-
ಲ್ಲಾ ನಿರ್ಮೂಲವು ಗುರುವೇ ೧

ಅನಿಮಿತ್ತ ಬಂಧುವೆಂದು ನಿನ್ನನು ನಂಬಿದೆ
ವನರುಹ ನಯನನ ತೋರೆನ್ನ ಮನದಲಿ ೨

ಕಂತುಜನಕನನಂತ ಮಹಿಮೆಯ
ಸಂತ ಜನರಿಗೆ ಸಂತಸದಲಿ ಪೇಳ್ದ ೩

ಗುರುಕುಲತಿಲಕರೆ ಕವಿಸಾರ್ವಭೌಮರೆ
ಮರುತನ ಪದವೇರ್ವ ಸುಜನ ಶಿರೋಮಣಿ ೪

ಅನಂತ ಮಹಿಮನ ಫಣಿಶಾಯಿವಿಠಲನ
ಗುಣಗಳ ಪೊಗಳುವ ಪ್ರಸನ್ನ ಗುರುವರ ೫

(೧೧೧)

ಶ್ರೀ ವಾದಿರಾಜ ಸಲಹೆನ್ನ ರಾಜ
ಸೇವಕರಿಗಮರಭೂಜ ರಾಜಾ ಪ

ಪಾವನ ಸುಕೀರ್ತಿಚಂದ್ರಿಕೆಯಿಂದ ಥಳಥಳಿಸಿ
ಭೂವಲಯಕಾಹ್ಲಾದವನಿತ್ತೆ ರಾಜಾ ಅ.ಪ.

ಚತುರ ಹಯಗ್ರೀವ ವಹಿಸಿ ಹೊಳೆವ ದಶ-
ಮತಿ ಶಾಸ್ತ್ರರಥವ ನಿರ್ಮಿಸಿ
ಶ್ರುತಿ ಪಂಚರಾತ್ರವನ್ನು ವಾಜಿಗೈದು
ಋತುಭೇದಶರವಗೂಡಿಸಿ ನೆಸೆದು
ಕ್ಷಿತಿಯಾರ ದುರ್ವಾದಿಗಳ ಜಯಿಸಿದೆ ಅ-
ಪ್ರತಿಮ ಮಹಾರಥಿಕನೆನಿಸುವ ಚಕ್ರವರ್ತಿ ರಾಜಾ ೧

ಬೇಕಾದ ಪುರುಷಾರ್ಥವ ಕೊಡುವ ಗುಣ
ಶಾಖಿಗಳ ಸೊಬಗುದೋರೆ

ಶ್ರೀಕರ ಗ್ರಂಥ ರಚನಗಳನೇಕ ಪತ್ರಗಳಿರೆ
ಆ ಕರುಣಾಲೋಚನ ಕುಸುಮ ರಸವನುಂಡು
ಝೇಂಕರಿಪ ಕವಿ ಮಧುಮಕರಂದ ರಾಜಿಸುವ ರಾಜಾ ೨

ಸಾರಾರ್ಥ ಚೋರ ಕೂಲದಾಗಲ ಭೇದ ಸಂ-
ಚಾರ ಧರೆಯೊಳಗಿಡಿಸಿ
ಈರಮತ ಸದ್ವನದಿಹ ಪಂಡಿತ ಚ-
ಕೋರಗಳ ನಲಿನಲಿಸಿದೆ
ಧೀರ ವಾಗೀಶಕರವಾರ್ಧಿಭವ ವಾದಿವಂದ್ಯ
ವಾರಿನಿಧಿನಂದಕರ ಪ್ರಸನ್ವೆಂಕಟಪ್ರಿಯ ೩

(೧೧೨)

**ಸಂತ ಸಖಿ ಬಾರೆ ನಾವ್ ಪೋಗುವಾ ಕುಣಿದಾಡುವಾ**
**ನಲಿದಾಡುವಾ ವರ ಬೇಡುವಾ** ಪ

ಧವಲಗಂಗೆಯ ತೀರ್ಥವಂತೆ ಸ್ವಾದಿಯ ಸುಕ್ಷೇತ್ರವಂತೆ
ಹಯವದನನ ಸದನವಂತೆ ಬೃಂದಾವನವಿಹುದಂತೆ ೧

ಪಂಚ ವೃಂದಾವನಗಳಂತೆ ಕಾಂಚನತೆರ ಹೊಳೆವರಂತೆ
ಸಂಚಿತದಿ ಪಾಪ ಕಳೆದು ವಾಂಛಿತಾರ್ಥವೀವರಂತೆ ೨

ವಾದಿರಾಜ ಗುರುಗಳಂತೆ ವಾದದಲಿ ಶೂರರಂತೆ
ವೇದಶಾಸ್ತ್ರ ಘೋಷವಂತೆ ಮೋದ ಮನಕೆವೀವುದಂತೆ ೩

ದೇಶದೇಶದಿಂದ ಜನರು ಬಂದಿವರನು ಭಜಿಪರಂತೆ
ದಾಸಕೂಟ ವ್ಯಾಸಕೂಟ ನೋಡಲು ಬಲು ಸೊಗಸಂತೆ ೪

ದಾಸಜನಕೆ ಸ್ವರ್ಗವಂತೆ ವಾಸವಿಲ್ಲಿ ನಿವಾಸವಂತೆ
ದಾಸರಾಜ ಕೃಷ್ಣವಿಠಲದಾಸರ ದಾಸರಾಗೋಣಂತೆ ೫

(೧೧೩)

**ಸಂತೈಸು ತವ ದಾಸನೆಂದೆನ್ನನು** ಪ

ಸ್ವಾಂತದಲಿ ನೆಲಸಿ ಏಕಾಂತ ಭಕ್ತೋತ್ತಮನೇ ಅ.ಪ

ವಾಗೀಶಮುನಿಕರಾಂಬುಜ ಜಪದಿಂದ ಸಂಭವಿಸಿ
ಆಗಮೋಕ್ತಾರ್ಥಗಳ ಶಿಷ್ಯರಾದ
ಭಾಗವತ ಜನರಿಗುಲ್ಲಾಸದಲಿ ಬಿಡದೇ ಚೆ-
ನ್ನಾಗಿ ವ್ಯಾಖ್ಯಾನವನು ಪೇಳ್ದ ಗುರುಸುರತರುವೇ ೧

ಮೋದತೀರ್ಥಾನುಜರ ವಂಶಾಂಬುನಿಧಿಚಂದ್ರ
ಬಾಧಿಸುವ ದುಃಶಾಸ್ತ್ರಗಳನೇ ಮುರಿದು
ವಾದದಿಂದಲೆ ಸಕಲ ಮೇದಿನಿಯೊಳಗಿಪ್ಪ ದು-
ರ್ವಾದಿಗಳ ಭಂಗಿಸದೆ ಮಾಧವನ ಪ್ರಿಯನೇ ೨

ಕಲಿಕೃತಾಚರಣೆಗಳು ಬಲಿಯೆ ಹರಿಯಾಜ್ಞೆಯಿಂ-
ದಿಳೆಯೊಳವತರಿಸಿ ಸಜ್ಜನರಿಗೆಲ್ಲ
ತಿಳಿಯೆ ಪರತತ್ವವನು ಶಾಸ್ತ್ರಮುಖದಿಂದ ಯತಿ
ಕುಲತಿಲಕ ನಂಬಿದವರಿಗೆ ನಿತ್ಯ ಸುರಧೇನು ೩

ಪಾದಚಾರಿಗಳಾಗಿ ತೀರ್ಥಯಾತ್ರೆಗಳ ಸ-
ಮ್ಮೋದದಲಿ ಚರಿಸುತಲಿ ಚಮತ್ಕೃತಿಯಲಿ
ಸಾಧು ಸಮ್ಮತವಾದ ತೀರ್ಥಪ್ರಬಂಧವನು
ಆದರದಿ ರಚಿಸಿದ ಮಹಾ ದಯಾಂಬುಧಿಯೇ ೪

ಕ್ಷೋಭಕಾಲದಲಿ ಸಂಚರಿಸುತಿರಲು ಅ-
ಹೋಬಲದಿ ನೈವೇದ್ಯ ಕಲಹದಿಂದ
ಕ್ಷೋಭಿಗರ ಮಿಶ್ರಿತಾನ್ನವನುಂಡು ಕರಗಿಸಿದೆ
ಶ್ರೀ ಭಾರತೀರಮಣನಂತೆ ಹರಿಯ ಕರುಣದಲಿ ೫

ಚಂದ್ರಿಕಾಚಾರ್ಯರಲಿ ಶಿಷ್ಯರಂದದಲಿ ಚರಿಸಿ ಆ-
ನಂದದಿಂದಲಿ ವ್ಯಾಸ ಪ್ರತೀಕವನ್ನು
ತಂದು ನಿರ್ಭಯದಿ ಸರ್ವತ್ರದಲಿ ಮೆರೆದೆ ಯೋ-
ಗೀಂದ್ರ ದಂಡಕಾಷಾಯ ಧರಿಸಿದ ಗುರುವೆ ೬

ಅಂಕದಲ್ಲಿಪ್ಪ ಬಾಲಕನ ಬರುತಲೆ ಕಂಡು
ಶಂಖಚಕ್ರಾಂಕಿತನು ಈತನೆಂದು
ಶಂಕಿಸದೆ ಎನಗೆ ಪ್ರಾಗ್ಜನ್ಮದಲಿ[೧] ಪೇಳ್ದೆ ಅಕ-
ಳಂಕ ಸನ್ಮಹಿಮ ಹಯಮುಖನ ದಾಸಾಗ್ರಣಿಯೇ ೭

ಮಾರಪಿತ ನೀರಜಾಸನ ತೀವ್ರಗಮನ ಪ-
ದ್ಮಾರಿ ಮೌಳಿಗಳಿಂದ ಸಹಿತರಾಗಿ
ಸಾರಶ್ವೇತದೊಳಗಿಪ್ಪ ತೆರನಂತೆ
ಧೀರ ವೃಂದಾವನದಿ ತೋರುವೆ ನಿರಂತರದಿ ೮

ಸನ್ಮಹಿಮ **ವೇಣುಗೋಪಾಲವಿಠಲ** ಯದುವ-
ರೇಣ್ಯನ ಕೃಪಾಪಾತ್ರನೆಂದೆನಿಸುವ
ಘನ್ನ ಋಜುಗಣದೊಳಗೆ ಮಾನ್ಯನಾಗಿಹ ಸುಪ್ರ-
ಸನ್ನ ದ್ವಿಜಕುಲರನ್ನ ನಂಬಿದೆನೋ ನಿನ್ನ ೯

೧. ಎಂದರೆ ಬೇಲೂರಿನ ವೈಕುಂಠದಾಸರು

(೧೧೪)

**ಸರ್ವ ಇಷ್ಟಾರ್ಥಪ್ರದ ಶರ್ವ ವಂದ್ಯನ ಸ್ಮರಣೆ** ಪ

ಪಾರ್ವತೀಪತಿ ವಂದ್ಯ ಪವಮಾನನಾಗುವ
ಸಾರ್ವಭೌಮ ಗುರುರಾಜರ ಸ್ಮರಿಸೆ ಅ.ಪ

ನೇತ್ರಹೀನರಿಗೆ ನೇತ್ರವ ಕೊಡುವ
ಪುತ್ರರಿಲ್ಲದವಗೆ ಸತ್ಪುತ್ರರ ನೀಡುವ ೧

ಪಾದೋದಕ ಪಾನವದು ಪರಮ ಪವಿತ್ರವು
ಮೇದಿನಿಯೊಳು ನೈಜ ಸುಖ ಬಯಸುವವಗೆ ೨

ಕಷ್ಟಗಳೆಲ್ಲವು ನಷ್ಟವು ಇದು ದಿಟ
ಶ್ರೇಷ್ಠ ಗುರುವರರ ನಿಷ್ಠೆಯೋಳ್ ಸೇವಿಸೆ ೩

ನಮ್ಮ ಗುರುವರರ ಒಮ್ಮೆ ಸ್ಮರಿಸಲು
ರಮ್ಮೆಯರಸನು ಪ್ರಸನ್ನನಾಗುವ ೪

ರೋಗಾದ್ಯುಪದ್ರವ ತಾಪತ್ರಯ ನಿವಾರಣ
ಭೋಗಿಶಯನನ ನಿಜ ದಾಸರಲಿ ಭಕುತಿ ೫

ಭಕ್ತಿಯಲಿ ಸೇವಿಪ ಭಕುತ ಜನರಿಗೆ
ಭಕ್ತಿ ಮುಕ್ತಿಯನಿತ್ತು ಪಾಲಿಪ ಶಕ್ತರೊ ೬

ಮೂಕ ಬ್ರಾಹ್ಮಣನಿಗೆ ವ್ಯಾಖ್ಯಾನ ಬೋಧಿಸಿ
ನಾಕೇಶನಾಗೆಂದು ಪ್ರೀತಿಯಲಿ ವರವಿತ್ತೆ ೭

ದೀನಜನರ ಸುರಧೇನುವೆಂದೆನಿಸಿದ
ಮೌನಿರತ್ನ ಗುರುವರರಿಗೆ ಶರಣೆನೆ ೮

**ಫಣಿಶಾಯಿವಿಠಲ**ನ ಗುಣಗಳ ಪೊಗಳುವ
ಹನುಮ ಭೀಮ ಮಧ್ವರಾಗುವರ ಸ್ಮರಿಸಲು ೯

(೧೧೫)

**ಸಾಗಿ ಬಾರಯ್ಯ ಗುರು ವಾದಿರಾಜೇಂದ್ರಾರ್ಯ**
ಬಾಗುವೆ ನಾ ನಿನಗೆ ಶಿರವಾ ಪ

ಭಾಗವತರ ದುರಿತೌಘಂಗಳನೆ ಕಳೆದು
ಬಂದಾ ದುರ್ವಾದಿಗಳನೆ ಮುರಿದು
ಸುರರೆಲ್ಲ ಇವರ ಮೇಲ್ ಪೂಮಳೆಯ ಗರೆದು

ತುಂತುರರು ನಾರದರು ಗಾನಗಳಿಂದ ಮೆರೆದು
ಘಲುಘಲುರೆಂದು ಅಪ್ಸರರು ನಾಟ್ಯಗಳ ಕುಣಿದು ಅ.ಪ

ಹೊದ್ದಾ ಕಾವಿ ಶಾಟಿಯದೊಲೊಪ್ಪುವಾ
ಶ್ರೀಮುದ್ರಿ ಗಂಧಾಕ್ಷತಿಯಿಂದಾ
ಗಳದಲಿ ಶ್ರೀ ತುಳಸಿ ಪುಷ್ಪಮಾಲೆಗಳಿಂದಾ
ಝುಗಝುಗನೆ ಮುಖಕಮಲಗಳ್ಹೊಳೆವೋದು ಛಂದಾ
ಋಜುಗಣದವರಹುದೆಂದು ಪೇಳುವ ನರನಿಂದಾ
ಮಾಡುವವರಿಗೆ ಕ್ರಿಮಿಕೀಟಗಳುದರುವದು ದೇಹದಿಂದಾ
ಬಂದ ಜನರಿಗ್ಹರುಷ ಬಡಿಸುವದರಿಂದಾ ಮುದದಿಂದಾ ೧

ಏನ ಪೇಳಲಿ ಗುರುವೆ ನಿನ್ನಾ ಮಹಿಮೆಯಾ
ನೋಡಲಾಶ್ಚರ್ಯವೋ ಭೂತರಾಜರಿಂದಾ
ಪೂಜೆಗೊಂಬುವ ಛಂದಾವೊ
ಧಿಂ ಧಿಮಿ ಧಿಮಿಕೆಂದು ಕುಣಿದಾಡುವಾನಂದವೋ
ಯೆಡಬಲದಿ ದ್ವಾರಪಾಲಕರಿರುವಾನಂದವೋ
ಬಂದ ಜನರು ಭಕ್ತಿಯಿಂದ ಭಜಿಸುವವರಿಗೇ
ಮುಕ್ತಿಯನೆ ಕೊಡುವಾ ೨

ನಿನ್ನಂಥಾ ಕರುಣಿ ಗುರು ಇನ್ನಿಲ್ಲ ಧರೆಯೊಳು
ಮನ್ನಿಸೀ ಸಲಹಯ್ಯ ಮಹರಾಯ
ಘನ್ನ ಸಂಸಾರದೊಳ್ ಬನ್ನಬಟ್ಟು ಬಹಳ ನೊಂದೇನಿ
ಕೈಪಿಡಿದು ಬಂದು ನಿಂದೇನಿ
ಉದ್ಧಾರ ಮಾಡಬೇಕೆಂದು ಬಂದೇನಿ
ಯನ್ನಂಥ ಮಂದಭಾಗ್ಯ ಜೀವನ
ಕುಂದುಗಳೆಣಿಸದಾಗದೊ ಇಂದು
ಅಡಿಗಡಿಗೆ ನಮೋ ಎನ್ನುವೆ ಬೇಡುವೆನು ಬಂಧೋ ೩

ರುಕ್ಮಿಣೀ ಕಳುಹಿದಾ ವಾಲೆಯ ತಾನು
ಶ್ರೀಕೃಷ್ಣಗರ್ಪಿಸಿದನು ದ್ವಿಜನು ಸಾಮಾನ್ಯನಲ್ಲವೊ ಈತ
ಗುರುರಾಜನೆಂದೆನಿಸಿದಾ

ದುರ್ಮಾಯವಾದಿಗಳ ಜಯಸೀದಾ
ಪವಮಾನರಾಯನೆಂದೆನಿಸಿಽದಾ
ಸುರಸಗಮೃತವನುಣಿಸಿಽದಾ ವೃಂದಾವನಾಚಾರ್ಯರಿಂದ
ಸೇವೆ ಸ್ವೀಕರಿಸಿದಾ ಸುಖವ ಸುರಿಸಿದಾ ೪

ಸ್ವಾದಿಽಯ ಪುರದಲ್ಲಿ ಇರುವ್ಯೋರು ಗುರುರಾಜರು
ಧವಳಗಂಗೆಯ ಸ್ನಾನ ಅಮೃತಸ್ನಾನ
ಬಂದ ಸೇವಕರಿಗಭೀಷ್ಟವ ಕರೆದು ಕೊಡುವ
ಮಧ್ವಮತವನುದ್ಧಾರ ಮಾಡುವಾ
**ಕಾಳಿಮರ್ದನಕೃಷ್ಣನೊಲಿವಾ** ೫

(೧೧೬)

**ಸಾಧನಕೆ ಸಾಧನಾಖ್ಯಾನ ವೃಂದಾವನಾ** ಪ

**ಸೋದೆ ಪುರವಾಸಿ ಶ್ರೀ ವಾದಿರಾಜರ ಕರುಣಾ** ಅ.ಪ.

ಕುರುಡು ಶುನಕವು ತಾನು ನೆರೆದ ಸಂತೆಗೆ ಬಂದು
ಸರಕು ವಿನಿಮಯ ಮಾಡಿ ಮರಳಿ ಬರುತಿರುವಾ ।
ಪರಿಯ ಮಾಡದಲೆನ್ನ ಇರುವ ಸ್ವಪ್ನದಿ ತಿಳುಹಿ
ಕರುಣಿಸಿಹೆ ಮಹ ಮಹಿಮ ಗುರುಸಾರ್ವಭೌಮಾ ೧

ಕಾರ್ಯ ವೃಂದಾವನಾಚಾರ್ಯರೊಡೆವೆರಸುತ್ತ
ಧೈರ್ಯದಿಂದಲಿ ಗೈಸಿ ಭಾರ್ಯಸಹಕೃತದಿ ।
ಪ್ರೇರ್ಯ ಪ್ರೇರಕ ಹೃದಯ ಧಾರ್ಯಮಾರ್ಗವನರುಪಿ
ಸ್ಥೈರ್ಯವನು ಎನಗಿತ್ತ ಆಯ್ ಲಾತವ್ಯಾ ೨

ಜೀವ ಅಸ್ವಾತಂತ್ರ ದೇವ ನಿಜ ಸ್ವಾತಂತ್ರ
ನೀವೆ ಎಮ್ಮೊಳು ನಿಂತು ಸರ್ವ ಕಾರ್ಯಗಳಾ ।
ಓವಿ ಗೈವುತ ದೇವ ದೇವ ಹಯಮೊಗ **ಗುರು**
**ಗೋವಿಂದ**ವಿಠಲಂಗಿತ್ತು ತಾವಕನ ಸಲಹುವುದ ೩

(೧೧೭)

**ಸಾರಿ ಭಜಿಸಿರೋ ವಾದಿರಾಜ ಗುರುಗಳಾ**
**ಘೋರ ಸಂಕಟದಿಂದಾ ಪಾರು ಮಾಳ್ಪರಾ** ಪ

ಭುಜಗಣಸ್ಥರಾ ಅಜನ ಪದಕೆ ಅರ್ಹರಾ
ಸುಜನವಂದ್ಯರಾ ವಾಜಿವದನ ದಾಸರಾ ೧

ವಕ್ರತರ್ಕದಾ ವಾದಿ ಸೊಕ್ಕು ಮುರಿದರಾ
ಯುಕ್ತಿಮಲ್ಲಿಕಾ ರಚಿಸಿ ಮುಕ್ತಿ ತೋರ್ಪರಾ ೨

ಕುದುರೆ ಮೋರೆಯಾ ದೇವ ಮುದದಿ ಮೆಲುವನು
ಕಡಲೆ ಹೂರಣಾ ನೀವು ಕೊಡಲು ಅನುದಿನಾ ೩

ಭೂತರಾಜನು ಸೋತ ದಾಸನಾದನು
ಅತಿ ಮಹತ್ವದಾ ಸೇವೆ ಸತತ ಮಾಳ್ವನು ೪

ಭಕ್ತಿಯಿಂದಲಿ ಇವರ ಸ್ತುತಿಯ ಮಾಡಲು
**ಭೂಪತಿವಿಠ್ಠಲಾ** ಒಲಿದು ವರವಾ ಕೊಡುವನು ೫

(೧೧೮)

**ಸೋದಾಕ್ಷೇತ್ರದಿ ನೆಲಸಿಹ ಯತಿವರರ್‍ಯಾರೆ ಪೇಳಮ್ಮಯ್ಯ** ಪ

ಮೋದತೀರ್ಥ ವಂಶೋದಧಿ ಚಂದ್ರಮ–
ವಾದಿರಾಜ ಗುರುವರ್ಯ ಕಾಣಮ್ಮ ಅ.ಪ

ವಾಗೀಶ ಮುನಿಯ ಕರ ಕಂಜೋದಿತರಾರೇ ಪೇಳಮ್ಮಯ್ಯ
ಭಾಗವತ ಜನರ ಪ್ರೇಮದಿ ಪೋಷಿಪರಾರೇ ಪೇಳಮ್ಮಯ್ಯ
ರಾಗದ್ವೇಷಾಂತ್ಯರ್ಮಲ ಪರಿಹಾರಕರಾರೇ ಪೇಳಮ್ಮಯ್ಯ
ನಾಗಶಯನನನುರಾಗದಿ ಭಜಿಸುವ ಯೋಗೀಶ್ವರ
ಗುರುರಾಜ ಕಣಮ್ಮಾ ೧

ಚಂಡ ಪರಾಕ್ರಮ ಭೂತನಾಥನುತರಾರೇ ಪೇಳಮ್ಮಯ್ಯ
ಪಂಡಿತ ಸಮುದಯಮಂಡಿತ ಸದ್ಗುಣನಾರೇ ಪೇಳಮ್ಮಯ್ಯ
ಖಂಡಿಸಿ ನಿಖಿಳ ವಿತಂಡ ಕುಮತಿಮತರಾರೇ ಪೇಳಮ್ಮಯ್ಯ
ಖಂಡ ಪರಶುವಾಖಂಡಲ ಮುಖಸುರ ಮಂಡಲನುತ
ವರದಂಡಿ ಕಾಣಮ್ಮಾ ೨

ವೃಂದಾವನ ಪಂಚಕದಲಿ ಮೆರೆಯುವರಾರೇ ಪೇಳಮ್ಮಯ್ಯ
ವೃಂದಾರಕ ಗುಣವಂದಿತ ಪದವಪ್ಪುವರಾರೇ ಪೇಳಮ್ಮಯ್ಯ
ಛಂದದಿ ಸ್ವಪ್ನದಿ ದ್ವಿಜನಿಗೆ ಬೋಧಿಪರಾರೇ ಪೇಳಮ್ಮಯ್ಯ
ಸುಂದರ ಶ್ರೀಪ್ರಾಣಪತಿವಿಠಲ ಗುಣವೃಂದ ನಿರತ
ಯೋಗೀಂದ್ರ ಕಾಣಮ್ಮಾ ೩

(೧೧೯)

**ಸೋದಾಪುರದಲಿ ನಿಂತ ಸುಯತಿವರನ್ಯಾರೇ ಪೇಳಮ್ಮಯ್ಯಾ** ಪ

ಭೂಧರ ಹಯಮುಖ ಪಾದವ ಭಜಿಸುವ
ವಾದಿಗಜಕೆ ಮೃಗರಾಜ ಕಾಣಮ್ಮ ಅ.ಪ.

ಅಂಚೆವಾಹನ ಪ್ರಪಂಚದಿ ಪೊಳೆವ ವಿ –
ರಿಂಚಿಗೆ ಸಮನೇನೆ ಪೇಳಮ್ಮಯ್ಯಾ
ಸಂಚಿತ ಕರ್ಮವ ಕುಂಚಿಸಿ ಭಕ್ತರ
ಚಂಚಲ ಬಿಡಿಸುವನ್ಯಾರೇ ಪೇಳಮ್ಮಯ್ಯಾ
ಮಿಂಚುರಾಶಿಗೆ ಸಮ ಪಂಚವೃಂದಾವನ
ಲಾಂಭಿತನಾಗಿಹನ್ಯಾರೆ ಪೇಳಮ್ಮಯ್ಯಾ
ಚಂಚಲಾಕ್ಷಿ ತಿಳಿ ಪಂಚರೂಪಾತ್ಮಕ
ಮುಂಚಿಗೆ ಪ್ರಾಣ ವಿರಿಂಚಿ ಕಾಣಮ್ಮಾ ೧

ಮಂದಹಾಸಮುಖ ಕುಂದಕುಟ್ಮಲರದ–
ದಿಂದ ಶೋಭಿಪನ್ಯಾರೇ ಪೇಳಮ್ಮಯ್ಯಾ

ವಂದಿಪ ಜನರಘವೃಂದ ಕಳೆದು ಆ-
ನಂದವ ನೀಡುವನ್ಯಾರೇ ಪೇಳಮ್ಮಯ್ಯಾ
ಬೃಂದಾರಕ ಪ್ರತಿ ಸುಂದರ ಯತಿವರ-
ರಿಂದ ಪೂಜಿತನ್ಯಾರೇ ಪೇಳಮ್ಮಯ್ಯಾ
ಇಂದುಮುಖಿಯೆ ಈತ ಗಂಧವಾಹನನಾಗಿ
ಮಂದಜಾಸನ ಪದವೈದುವನಮ್ಮಾ ೨

ಖ್ಯಾತಮಹಿಮ ಮಾಯಿವ್ರಾತ ವಿ -
ಘಾತವ ಮಾಡಿಹನ್ಯಾರೇ ಪೇಳಮ್ಮಯ್ಯಾ
ಆತುರ ಜನರಿಗೆ ಮಾತಾ ಪಿತರಂತೆ-
ನೀತಪಾಲಿಸುವನ್ಯಾರೇ ಪೇಳಮ್ಮಯ್ಯಾ
ದಾತ **ಗುರುಜಗನ್ನಾಥವಿಠಲನ**
ಪ್ರೀತಿಯ ಪಡೆದಿಹನ್ಯಾರೇ ಪೇಳಮ್ಮಯ್ಯಾ
ವೀತಭಯ ಪುರುಹೂತ ಪ್ರಮುಖ ನುತ
ಭೂತನಾಥನ ಪಿತ ಮಾತರಿಶ್ವನಮ್ಮಾ ೩

(೧೨೦)

**ಸೋದಾಪುರದಲಿ ಮನೆ ಮಾಡಿದ**
ಮುನಿವರನ್ಯಾರೆ ಪೇಳಮ್ಮಯ್ಯ ಪ

ಬಾದರಾಯಣ ಪದಪೂಜಕರಿಗೆ
ಮೋದ ಕೊಡುವ ವಾದಿರಾಜ ಕಾಣಮ್ಮ ಅ.ಪ

ವೃಂದಾವನಾಖ್ಯಾನವ ಸ್ವಪ್ನದಿ
ಮಂದಮತಿಗೆ ಬೋಧಿಸಿದ ಕಾಣಮ್ಮ
ಮಂದಮತಿಗೆ ದೇವೇಂದ್ರ ಪದವಿ ಕೊಡುವೆ-
ನೆಂದು ದಯದಿ ಪೇಳಿದ ಕಾಣಮ್ಮ ೧

ಒಂದೇ ಮನದಿ ಭಜಿಸುವರಿಗೆ, ಸ್ವಾ-
ನಂದ ಕೊಡುವ ಪೂರ್ಣಬೋಧ ಕಾಣಮ್ಮ

ಕುಂದು ಎಣಿಸುವರ ಕುಂದಿಸುವನು ಯಮ
ಸಂದೇಹವಿನಿತಿಲ್ಲ ಕಾಣಮ್ಮಯ್ಯ ೨

ಬದರಿಯಿಂದ ತ್ರಿವಿಕ್ರಮ ದೇವರ
ರಥ ಸಹಿತದಿ ತರಿಸಿದ ಕಾಣಮ್ಮ
ಮುದದಿ ಪ್ರತಿಷ್ಠಿಸಿ ಅತಿ ವೈಭವದಿಂ
ಗೈದುತ್ಸವದ ಪ್ರತಿ ವರುಷದ ಪರಿಯ ಕೇಳಮ್ಮಯ್ಯ ೩

ವಿಧಿಭವಾದಿ ಸಮಸ್ತ ದಿವಿಜರ ಸ-
ಮುದಾಯದಿಂದ ಗುರು ಮೆರೆವ ಕಾಣಮ್ಮ
ಸುದತಿ ಭೈಷ್ಮಿ ನೀಡಿದ ಓಲೆಯ ತಂದು
ಯದುಪತಿಗೊಪ್ಪಿಸಿದವರು ಕಾಣಮ್ಮ ೪

ಬಡವರಾಪ್ತ ವಾಗೀಶತೀರ್ಥ ಕರಕಮಲ-
ದೊಳುದಿಸಿದ ಉಡುವದನ ಪೇಳಮ್ಮಯ್ಯ
ಕಡು ಕುವಾದಿಮುಖಕಮಲ ಕೆಡಿಸಿ
ಈಡಿಲ್ಲದ ಸುಮತವ ಪೊರೆದವ ಕಾಣಮ್ಮ ೫

ಒಡೆಯ **ಬಾದರಾಯಣವಿಠಲ** ಪಾದ
ಪಿಡಿದವರೊಳವನುತ್ತಮನು ಕೇಳಮ್ಮಯ್ಯ
ಪೊಡವಿಯೊಳಗೆ ತನ್ನಡಿ ಭಕ್ತರ ಬೆಂ-
ಬಿಡದೆ ಕಾವ ದಯಕಡಲ ಕಾಣಮ್ಮಯ್ಯ ೬

(೧೨೧)

**ಸೋದೆ ರಾಜರ ಭಜಿಸೋ । ಮಾನವ ನೀನು**
**ವಾದಿರಾಜರ ಪೂಜಿಸೋ** ಪ

ಮೋದತೀರ್ಥರ ಮ । ತೋದ್ಧಾರ ಮಾಡಿದ ಧೀರ
ಸಾಧು ಹೃದ್ವನಜಾಪ್ತಬುಧ ಜನವಂದ್ಯರ ಅ.ಪ

ಶಾರ್ವರಿ ವತ್ಸರದೀ । ಜನಿಸಿ ಗೌರಿ
ಗರ್ಭ ಸುಧಾಂಬುಧಿಲೀ ॥
ಪುರಬಾಹ್ಯ ಪುಟ್ಟಿದ । ಕಾರಣದಿಂದಲಿ
ವರಯತಿ ವಾಗೀಶ । ಕರಜನೆನಿಸಿ ಮೆರೆದ ೧

ವೇದಾದಿ ಶಾಸ್ತ್ರಗಳಾ । ಓದಲು ಹಂಪೆ
ಸಾಧು ವ್ಯಾಸರ ಬಳಿಗೇ ॥
ಮೋದದಿ ಬಂದು ಮಧ್ವಾಗಮ ಪಠಿಸುತ್ತ
ವೇದವಿನುತ ಸಿರಿಹರಿಯ ಪೂಜಿಸಿದ ೨

ವಾಲಿ ಭಂಡಾರವನೂ । ಶೋಧಿಸೆ ಅಲ್ಲಿ
ಶೀಲ ಇನಜಾರ್ಚಿಸಿದ ॥
ಲೀಲ ವಿಗ್ರಹ ರಾಮ । ವಿಠಲ ಮೂರ್ತಿಗಳನ್ನ
ಕೋಲಾಹಲದಿ ತಂದು । ಭಾಳ ಪೂಜಿಸಿದ ೩

ವ್ಯಾಸರಾಜಾರ್ಚಿತನಾ । ದೇವನ ವೇದ
ವ್ಯಾಸರಿಂದಲಿ ಗಳಿಸಿದಾ ।
ವ್ಯಾಸಮುಷ್ಟಿಕೆಯ ವಿ । ಶ್ವಾಸದಿಂದಲಿ ಪೊಂದಿ
ಶ್ರೀಶ ಉಡುಪಿನ ಕೃಷ್ಣ । ವಾಸ ಸ್ಥಾನಕೆ ಬಂದ ೪

ಕವಿಕುಲ ಸಭೆಯೊಳಗೇ । ಪೂಣೆಯ ಪುರದಿ
ನವರಸಲಂಕಾರದೀ ॥
ಕವನ ರಚಿಸಿ ರುಕ್ಮಿಣೀಶವಿಜಯ ಗ್ರಂಥ
ಕವಿ ಕುಲೋತ್ತಂಸ । ತಾನೆನಿಸುತ್ತ ಮೆರೆದಂಥ

ಪಂಢರಿಪುರ ಮಾರ್ಗವ । ಸವೆಸುತ ಬರೆ
ಮುಂದು ಸೈನಿಕರ್ ಬರಲೂ ॥
ಪುಂಡಲೀಕಗೆ ವರದ । ಪುಂಡರೀಕಾಕ್ಷನ
ಹಿಂಡು ಶ್ವೇತಾಶ್ವಗಳಿಂದ ವಾರಿಸಿದಾ ೬

ಹಯಗ್ರೀವ ಪದಾರಾಧಕಾ । ಶಿರದಿ ಧೃತ
ದಿವ್ಯ ಹರಿವಾಣ ಪೂರಣವ ॥
ಹಯವದನನು ಬಂದು । ಜಯ ಘೋಷದಲಿ ಮೆದ್ದು
ದಯ ದೃಷ್ಟಿ ತೋರಿದ । ಭಾವಿ ಮಾರುತರ ೭

ಶ್ರೀಶನ್ನ ಪ್ರಯಾಗದಿ ಚಿಂತಿಸುತಿರೆ
ಕೇಶವನೊಲಿಯುತಲೀ ॥
ವಾಸವಾನುಜ ಶ್ರೀಶ । ವ್ಯಾಸರ ದಯ ಪೊಂದಿ
ದಶಮತಿಗಳ ಪಾದ । ಬಿಸಜವ ಕಂಡರ ೮

ವಾದಿರಾಜರ ಶಿಷ್ಯನು । ಪಂಡಿತನೆಂಬ
ಮದದಿಂದ ಗರ್ವಿತನೂ ॥
ಸಾಧಿಸೆ ಕುಟಿಲವ । ಸೋದೆ ರಾಜರಲ್ಲಿ
ಪೋದ ಶಾಪದಿ ಅವ । ಬೊಮ್ಮ ರಕ್ಕಸನಾಗೀ ೯

ಸಕಲ ಶಿಷ್ಯರವೆರಸಿ । ರಾಜರು ಬರೆ
ರಕ್ಕಸ ಕರೆದ ವಾದಕ್ಕೀ ॥
'ಆಕಾಮವೈ' ಕೋ ನಸ್ನಾತನೆಂದೆನೆ ಅವ
ಕಾಕು ರಂಡೆಯ ಪುತ್ರ । ತೋಕ ನೀನೆಂದ ೧೦

ಮೇನೆ ಪಾಲಕಿ ಹೊರುವ । ನರೆಯಣ ಭೂತ
ಯಾನ ವಾಹಕನಾದನೂ ॥
ಆನೆಂತು ಬಣ್ಣಿಪೆ । ಮುನಿಕುಲ ದಿನಮಣಿ
ವೇಣುಗಾನ ಪ್ರಿಯ । ಕೃಷ್ಣ ಸೇವಕರಾ ೧೧

ಆ ಮಹ ನೇತ್ರಾವತಿ । ಸಂಗಮವೆನ್ನ
ಕೌಮಾರ ನದಿ ಸನಿಯದಿ ॥
ಈ ಮಹಾ ಮಹಿಮರು । ಸಾಸಿರ ಲಿಂಗದ
ನೇಮದ ಪೂಜೆಗೆ । ನಿರ್ಮಿಸಿದರು ತೀರ್ಥ ೧೨

ಋಣದಿ ಪೀಡಿತ ದ್ವಿಜನು । ನತಿಸೆ ಇವರ
ಸ್ವರ್ಣ ವೃಷ್ಟಿಯ ಪಡೆದ ॥
ಅರ್ಣ ಸಂಪ್ರತಿ ಪಾದ್ಯ । ಸ್ವರ್ಣ ಗರ್ಭನ ಪಿತ
ಪೂರ್ಣಗೆ ಸುಪ್ರೀಯಗಸದಳವೇನಿದು ೧೩

ಗರಳ ಮಿಶ್ರಿತ ನೈವೇದ್ಯ । ಪಾಚಕ ತೆರೆ
ಹರಿಗೆ ಸಮರ್ಪಿಸಿದಾ ॥
ಸಿರಿಪತಿ ಕಂಠದೋಳ್ । ಕರಿಯ ವರ್ಣವ ಕಂಡು
ಅರಿತು ಸೇವಿಸಿದನು । ಹರಿಯ ಪ್ರಸಾದವ ೧೪

ರಜತಪುರಿಯ ಮಠದಿ । ಪರ್ಯಾಯದ
ಪೂಜೆಯ ವಿಸ್ತರಿಸೀ ।
ಅಜಜನಕನ ದಿವ್ಯ । ಭಜನೆ ಪದ್ಧತಿಗಳ
ಗಜಪಾಲ ಸಿರಿ ಕೃಷ್ಣನಂಘ್ರಿಗರ್ಪಿಸಿದ ೧೫

ಅರಿಯು ಮುತ್ತಲು ಪುರವ । ಸೋದಾಧಿಪ
ಮೊರೆಯ ಹೊಕ್ಕನು ರಾಜರ ॥
ಭರದಿ ನಾರಾಯಣ । ವರ ಭೂತನನ ಕಳುಹಿ
ಅರಿಭಯವಾರಿಸಿ । ಮೊರೆದ ನಾಯಕನಾ ೧೬

ಸೋದೆಯಲ್ಲೋರ್ವ ಶೈವ । ಬಲು ಗರ್ವದಿ
ವಾದ ಮಾಡುತಲವನೂ ॥
ವೇದ ಮತವ ಬಲು । ವಿಧದಿ ದೂಷಿಸಿ ಕಡು
ಬಾಧೆ ಪಡಿಸುತಲಿದ್ದ । ಬುಧಜನ ವೃಂದವ ೧೭

ಬಿಜಯ ಗೈಯ್ಯುತ ಅಲ್ಲಿಗೆ । ಗುರುರಾಜರು
ವಿಜಯ ಉತ್ಸವ ರಚಿಸೇ ॥
ನಿಜ ಭೃತ್ಯ ಭಾವದಿ । ವಿಜಯಪತ್ರವನಿತ್ತು
ನಿಜ ಬಿರುದುಗಳವರ । ಪದಕೆ ಅರ್ಪಿಸಿದ ೧೮

ತ್ರಿವಿಕ್ರಮಾಲಯ ಸ್ಥಾಪನೆ । ರಚಿಸಿ ಮೆರೆದ
ದಿವ್ಯ ಶಾಲೀವಾಹನ್ನ ॥
ಸಾವಿರೈನೂರ್ನಾಲ್ಕ । ಚಿತ್ರ ಭಾನುವಿನಲ್ಲಿ
ರವಿಯು ಮೇಷಾರ್ಧದಿ । ಚರಿಸುವ ದಿನದಿ ೧೯

ರಥದಿ ಮೂರ್ತಿಯ ಸೇರಿಸಿ । ಬದರಿಯಿಂದ
ಭೂತ ನರೆಯಣ ಬರುತಿರೆ ॥
ಪಥದಿ ರಕ್ಕಸ ಸೆಣಸೆ । ಪೃಥುಕು ಆಯುಧ ಬಿಟ್ಟು
ರಥದ ಗಾಲಿಯಲಿಂದ । ಹತಗೈದನವನ ೨೦

ವೇದಾರ್ಥ ಬೃಂಹಿತದ । ಬಹು ಗ್ರಂಥಗಳ್
ಪದ ಪದ್ಯ ಸೂಳ್ಹಾದಿಯ ॥
ಸೋದೆ ಮಠದಿ ನಿಂದು । ವಾದಿರಾಜರು ರಚಿಸಿ
ಬುಧರಿಗಾನಂದವ । ಮುದದಿ ಪಾಲಿಸಿದ ೨೧

ತ್ರಿವಿಕ್ರಮ ರಥೋತ್ಸವದಿ । ಕರೆಯಲು ಬಂದ
ದಿವಿರಾಜ ಜನರು ಕಳುಹಿ ॥
ಭವ್ಯ ಸುಪಂಚ ವೃಂದಾವನಗಳ ರಚಿಸಿ
ದಿವಿರಾಜ ಗರುಹಿದರ್ ತಮ್ಮಯ ಬರವನು ೨೨

ಶಾರ್ವರಿ ವತ್ಸರದೀ । ಫಾಲ್ಗುಣ ವದ್ಯ
ಮೂರನೆ ದಿವಸದಲ್ಲೀ ॥
ವರ ವೃಂದಾವನ ಪೊಕ್ಕು । **ಗುರುಗೋವಿಂದವಿಠಲನ**
ನಿರುತ ಧ್ಯಾನದೊಳಲ್ಲಿ । ವರವ ಪಾಲಿಸುತಿಹರ ೨೩

(೧೨೨)

**ಸ್ಮರಣೆ ಮಾಡಿರೋ ಸೋದೆ ವಾದಿರಾಜರ**
ಮರುತ ಪಟ್ಟಕೆ ಮುಂದೆ ಬರುವ ರಾಜರ ಪ

ಯತಿಯ ವಾಗೀಶರ ಕರಜಖ್ಯಾತರ
ಹಿತವ ಕೊಡುವರ ಇಹದ ದುರಿತ ಕಳೆವರ ೧

ರಾಮಾಚಾರ್ಯರಾ ಗೌರಿ ಪ್ರೇಮ ಪುತ್ರರ
ಸೋಮಶೇಖರಗೆ ಇವರು ಗುರುಗಳೆನಿಪರ ೨

ಗೃಹದ ಬಾಹ್ಯ ಗದ್ದೆಯಲ್ಲಿ ಜನಿಸಿ ಮೆರೆದರ
ಮಹಾಮಹಿಮರ ಲಾತವ್ಯ ಪದಸ್ಥರ ೩

ಭೂವರಾಹನಾ ಪಾದ ಭಜಿಪ ಶ್ರೇಷ್ಠರ
ಭೂವರಾಹನಾ ನಾಮದಲ್ಲಿ ಮೆರೆದರ ೪

ಸಕಲ ಕ್ಷೇತ್ರವ ಕಂಡು ವರ್ಣಿಸಿಪ್ಪರ
ಸಕಲ ಸುಜನರ ಸೇವೆಗೊಂಡು ಕಾಯ್ವರ ೫

ಶಾಲಿಗ್ರಮದ ಹಾರ ಹರಿಗೆ ಇತ್ತರ
ಶಾಲ್ಮಲೀ ತೀರದಲ್ಲಿ ತಪವಗೊಂಡರ ೬

ಪಂಢರಾಪುರಕೆ ಹೋಗಿ ಹರಿಯ ಕಂಡರ
ಪಾಂಡುರಂಗನನ್ನು ಕಂಡು ಹರುಷಗೊಂಡರ ೭

ರುಕ್ಮಿಣೀಶವಿಜಯ ರಚಿಸಿ ಸ್ತುತ್ಯರಾದರ
ರುಕ್ಮಿಣೀಶ ಕರ್ತೃವೆಂದು ಅರ್ಪಿಸಿಪ್ಪರ ೮

ಮದುವೆ ಕಾಲದಲ್ಲಿ ಸತ್ತ ವರನ ಕಾಯ್ದರ
ಮುದದಿ ನೆರೆದ ಜನರಿಗೆಲ್ಲ ಮುದವನಿತ್ತರ ೯

ಮಂತ್ರ ರೇಖೆ ರಚಿಸಿ ನಕ್ರಗಳನು ಅಟ್ಟರ
ಮಂತ್ರವಾದಿ ತಂತ್ರವನ್ನು ಬಯಲು ಮಾಡ್ದರ ೧೦

ಕ್ಲಿಷ್ಟ ಭಾರತದ ಪದಕೆ ಅರ್ಥ ಬರೆದರ
ಶ್ರೇಷ್ಠಮಾತೆ ವಚನವನ್ನು ಮಾನ್ಯ ಮಾಡ್ದರ ೧೧

ಲೋಭಿಯನ್ನು ಕಂಡು ಶಾಲಿಗ್ರಾಮವಿತ್ತರಾ
ಲೋಭಿ ಧಾರಾಳಿಯಾದ ದಯದಿ ಗುರುವರಾ ೧೨

ವಾದಿಗಳನು ವಾದದಲ್ಲಿ ಗೆದ್ದ ರಾಜರಾ
ವೇದವ್ಯಾಸರನ್ನು ಬದರಿಯಲ್ಲಿ ಕಂಡರಾ ೧೩

ಬಂಡೆ ಸೀಳಿ ರಾಜನೀಗೆ ದ್ರವ್ಯವಿತ್ತರಾ
ಕಂಡು ಕರುಣೆ ವಿಠ್ಠಲನ್ನ ಇಟ್ಟುಕೊಂಡರಾ ೧೪

ಪ್ರಸಂಗಾಭರಣ ತೀರ್ಥ ಪ್ರಶಸ್ತಿ ಪಡೆದರಾ
ಅಸದೃಶರು ರಾಜರೆಂಬ ಖ್ಯಾತಿ ಪಡೆದರಾ ೧೫

ಭೂತಗಣದ ಬೀಡಿನಲ್ಲಿ ಹರನ ನಿಲಿಸಿದ
ಖ್ಯಾತವಾಯ್ತು ಬೀಡು ಧರ್ಮಸ್ಥಳವು ಎನ್ನುತಾ ೧೬

ದಂಡದಿಂದ ದಂಡ ತೀರಥ ಉಂಟು ಮಾಡಿದ
ಕಂಡು ಹರುಷ ಪಟ್ಟರೆಲ್ಲ ಪುರದ ಬಹುಜನ ೧೭

ಎರಡು ಮಾಸ ಪೂಜೆ ಎರಡು ವರುಷ ಮಾಡಿದ
ಪರಮ ಪುಣ್ಯ ಕ್ಷೇತ್ರ ಉಡುಪಿಯಲ್ಲಿ ಕೃಷ್ಣನ ೧೮

ಭೂತರಾಜ ಗುರು ಅಯ್ಯ ವಾದಿರಾಜರಾ
ಪ್ರೀತಿಯಿಂದ ಸ್ತೋತ್ರ ಮಾಡೆ ಒಲಿದು ಕಾಯ್ವರಾ ೧೯

ಮಗುವ ಕಂಡರಃ ಮಾಯದ ಮಗುವ ಕಂಡರ
ನಗುತಲಿದ್ದ ಕೃಷ್ಣನೆಂಬ ಮಗುವ ಕಂಡರ ೨೦

ಸ್ತುತ್ಯ ವೈಕುಂಠ ದಾಸರನ್ನು ನೋಡಿದ
ಮತ್ತೆ ದಾಸೋತ್ತಮರು ಎಂದು ಪೊಗಳಿದ ೨೧

ಪಂಚ ವೃಂದಾವನದಿ ಪಂಚರೂಪನಾ
ಮುಂಚೆ ಸನ್ನಿಧಾನವನ್ನು ಅಲ್ಲಿ ಬರಿಸಿದ ೨೨

ಮೂರು ವಿಕ್ರಮನ ರಥದ ಉತ್ಸವ ಮಾಡಿದ
ಕಾರಣಾತ್ಮಕ ಸಾರ್ವಭೌಮನನ್ನು ನಿಲಿಸಿದ ೨೩

(೧೨೩)

**ಸ್ವಜನಾಂಬುಜ ಹರಿರಾಜ ಜಯ** ಪ

ಸ್ವಜನಾಂಬುಜ ಹರಿರಾಜ ವಾಜಿಮುಖ
ಭಜನೋತ್ಸುಕ ವಾದಿರಾಜ ಅ.ಪ

ಮೋದತೀರ್ಥ ವಂಶೋದಧಿ ವಿಧುವರ
ವಾದಿ ವಿಜಯ ಸುವಿನೋದ ೧

ಯೋಗಿವರ್ಯ ವಾಗೀಶನಂದನ
ಶ್ಲಾಘನೀಯ ಶುಭ ಯೋಗ ೨

ತಾಪಸ ಜನ ಹೃತ್ತಾಪಹರಣ ಸಂ-
ಗೋಪಿತ ಸುಗುಣಕಲಾಪ ೩

ದುರಿತ ತಿಮಿರ ಭಾಸ್ಕರ, ಕರುಣಾಕರ
ಪರಮಹಂಸ ಮಂದಾರ ೪

ದುಷ್ಟ ಕಾಮಗಿರಿ ಶ್ರೇಷ್ಠ ವಜ್ರನಿಭ
ಶಿಷ್ಟ ಶರಣ ಸಂತುಷ್ಟ ೫

ಕುಂದರದನ ರಾಕೇಂದುವದನ ಸ್ವಾ-
ನಂದಿತ ನಿಜ ಜನವೃಂದಾ ೬

ಆಧಿವ್ಯಾಧಿ ವಿಭೇದಕ ಛೇದಕ
ಸಾಧಕ ಮುನಿಕುಲ ಬೋಧಾ ೭

ನಾರಾಯಣ ಮುದ್ರಾದಿ ವಿಧಾರಣ
ಕಾರಣ ಭರಣೋದ್ಧಾರ ೮

ಹೇಯ ಸಮಯ ಘನ ವಾಯುದೇವ ಸಮ
ಗಾಯಕ ಕವಿತತಿಗೇಯ ೯

(೧೨೪)

**ಹಯಮುಖ ಪದಾಬ್ಜ ಮಧುಪಾ । ದುರ್ಭವ**
**ಭಯವ ತಾರಿಸು ಮುನಿಪಾ** ಪ

ವ್ರಯವಾಯಿತು ಮಮ । ಆಯುವು ಎಲ್ಲವು
ಪ್ರಿಯ ನೀನಲ್ಲವೆ । ಭಯ ಪರಿಹರಿಸೈ ಅ.ಪ.

ರಜತ ಪುರಿಲಿ ನಿಂದೂ । ವಿಧಿಸಿದಿ
ಅಜಪಿತ ಭಜನೆಯನಂದೂ ।
ಖಜಗಣದಲಿ ಬಹು । ರಾಜಿಪ ಗುರುವೇ
ಅಜನ ಸುಪದವಿಗೆ । ನಿಜದಿ ಬರುವ ಯತಿ ೧

ಸೋದೆ ಪುರದಿ ವಾಸಾ । ಭಕ್ತರ-
ಗಾಧ ದೋಷ ನಾಶಾ ॥
ವಾದಿಜನರ ಮದಭೇದನ ದಶಮತಿ
ಬೋಧಪ್ರೀಯ ಗುರು । ಮೋದದ ಪಾಲಿಸು ೨

ಪಂಚ ವೃಂದಾವನವಾ । ರಚಿಸುತ
ಪಂಚರೂಪಿ ಹರಿಯಾ ॥
ಸಂಚಿಂತಿಸಿ ಭಕ್ತ । ವಾಂಛಿತಗರೆಯಲು
ಸಂಚುಗೊಳಿಸಿ ಪ್ರಪಂಚವ ತೊರೆದೇ ೩

ಅಮರೇಂದ್ರ ನಾಳ್ಬರಲೂ । ತ್ರೈವಿ
ಕ್ರಮ ದುತ್ಸವದೋಳೂ ॥
ಸಮಯವಲ್ಲವಿದು । ನಿಮಗೆಂದೆನುತಲಿ
ಕ್ರಮಿಸುವ ತೆರ ನೀ । ಮಾಡಿದೆ ಯತಿವರ ೪

ಪೂವಿಲ್ಲನ ಪಿತನಾ । **ಗುರು**
**ಗೋವಿಂದ ವಿಠ್ಠಲನಾ** ॥
ಭಾವದಿ ಕಾಣುತ ಮೈಮರೆದ್ಹಿಗ್ಗುವ
ಈ ವಿಧ ಸುಖ ಯಾವಾಗಲು ಕಾಣುವ ೫

(೧೨೫)

**ಹೊಡಿ ನಗಾರಿ ಮೇಲೆ ಕೈಯಾ ಕಡಕಡ** ಪ

ಕಡು ವಾದಿರಾಜರು ದೃಢ ಋಜುಗತರೆಂದು ಅ.ಪ

ಹಯಮುಖ ಪಾದದ್ವಯ ಸೇವಕ ವರ
ಜಯಶೀಲರು ನಿಜ ಭಯಹಾರರೆಂದ್ಹೊಡಿ ನಗಾರಿ ೧

ದೂಷಕರನು ಬಹು ಘಾಶಿಕೊಟ್ಟು ನಿಜ
ದಾಸರ ತೋಷಿಸಿ ಪೋಷಿಪರಿವರೆಂದ್ಹೊಡಿ ನಗಾರಿ ೨

ಮೋದತೀರ್ಥ ಮತ ಸಾಧಿಸಿ ಮೆರೆಸುವ
ವಾದಿರಾಜಗುರು ಬೋಧರು ಸಮರೆಂದ್ಹೊಡಿ ೩

ಇಂದಿರಾಪತಿಯ ಛಂದದಿ ಪೂಜಿಪ
ನಂದಿವಾಹನ ಮುಖ ವಂದ್ಯರಿವರೆಂದ್ಹೊಡಿ ೪

ಕಲಿ ಮುಖದಾನವ ಬಲವ ಜಯಿಪ ನಿ-
ಷ್ಕಲುಷ ಚಿತ್ತ ಯತಿಕುಲ ಭೂಷಣಿವರೆಂದ್ಹೊಡಿ ೫

ಕಂಸಾದಿಮುಖಧ್ವಂಸಿ ಸಮೀಕರಣ
ಹಂಸವಾಹ ಪ್ರಶಾಂತ ಸಹಿತರೆಂದ್ಹೊಡಿ ೬

ಸುಂದರ ಪಂಚ ಸುವೃಂದಾವನದೊಳು
ವೃಂದಾರಕ ಮುನಿವೃಂದ ವಂದ್ಯರೆಂದ್ಹೊಡಿ ೭

ಲಾತವ್ಯಾತ್ಮಕ ಭೀತಿರಹಿತ ಮಹ-
ಪಾತಕಹರ ಸುರನಾಥ ಮಹಿಮರೆಂದ್ಹೊಡಿ ೮

ಭಾವಿ ಭಾರತಿದೇವಿ ಕರಕಮಲ ಸೇವಿತೇ ಪದರಾ-
ಜೀವದ್ವಯರೆಂದ್ಹೊಡಿ ೯

ವೃಂದಾವನ ಸದಮಂದಾಖ್ಯಾನವ ಭೂ-
ವೃಂದಾರಕರಿಗೆ ತಿಳಿಪರಿವರೆಂದ್ಹೊಡಿ ೧೦

ಸಾನುರಾಗದಿ ಪ್ರಾಣಪತಿವಿಠಲನ
ಧ್ಯಾನದಿಂದ ಸನ್ಮಾನಿತರಿವರೆಂದ್ಹೊಡಿ ೧೧

## ೪. ಮಂಗಳ ಪದಗಳು

### (೧೨೬)

### ಶ್ರೀ ವಾದಿರಾಜಮಂಗಲಾಷ್ಟಕಮ್

ಶ್ರೀಮತ್ತೌಲವಮಂಡಲೇ ಸುಮಪುರೇ ಕುಂಭಾಸಿ ತೋऽದೂರತೋ
ವಾಣ್ಯಾಂ ರಾಮಬುಧಾತ್ಸುತಸ್ಸಮ ಭವದ್ವಾಗೀಶತೀರ್ಥಾಶಿಷಾ ।
ಕೇದಾರೇऽಷ್ಟಮವತ್ಸರೇ ಯತಿಪದಂಚಾಲಾಭಿ ವಾಗೀಶ್ವರಾ-
ದಶ್ವಾಸ್ಯಾನುಗವಾದಿರಾಜಗುರುರಾಡ್ದದ್ಯಾತ್ಸದಾ ಮಂಗಲಮ್ ೧

ಬಾಲ್ಯದ್ವಾಗ್ಯುಧಿ ಸರ್ವವಾದಿ ಮದಾಹऽ ತೋ ವಾದಿರಾಜಾಭಿಧಾ
ಮನ್ವರ್ಥೀಂ ಕುರುತೇ ವಿರಕ್ತಿಶಮನಜ್ಞಾನಾದಸದ್ವಿಗ್ರಹಃ ।
ಪೂರ್ಣಪ್ರಜ್ಞಮತ ಪ್ರಚಾರಣಕೃತೇ ಸಮ್ಯಗ್ವ್ಯಧಾದ್ದಿಗ್ಜಯಂ
ಅಶ್ವಾಸ್ಯಾನುಗವಾದಿರಾಜಗುರುರಾಡ್ದದ್ಯಾತ್ಸದಾ ಮಂಗಲಮ್ ೨

ಗತ್ವಾಽಸೇತುಹಿಮಾಚಲಂ ನರಹರೇಸ್ಸ್ಥಾನಾನಿ ಸರ್ವಾಣಿ ಚ
ಸ್ನಾತ್ವಾ ತೀರ್ಥವರೇಷು ಭಕ್ತಿ ಕರೇಷ್ವಾಸ್ಥಾಪ್ಯ ಮಾಧ್ವಂ ಮತಮ್
ತೀರ್ಥೇಷೂತ್ತಮತಾಪ್ಯಸೂಚಿ ಗುರುಣಾ ತೀರ್ಥಪ್ರಬಂಧೋಕ್ತಿಭಿಃ
ಅಶ್ವಾಸ್ಯಾನುಗವಾದಿರಾಜಗುರುರಾಡ್ದದ್ಯಾತ್ಸಧಾ ಮಂಗಲಮ್ ೩

ಭೂಮ್ಯಾಂ ಸ್ಥಾಪಿತ ಭೂಮಿಪಾಲತನಯಂ ಯೋಽಜೀವಯತ್ತೀರ್ಥತೋ
ಭೂಪಾದ್ದತ್ತಮನರ್ಘ್ಯ ವಿತ್ತ ಮತುಲಂ ಗಂಗಾಜಲೇ ಪ್ರಾಕ್ಷಿಪತ್ ।
ಲಕ್ಷ್ಯಾಃ ಪ್ರಾಕೃತಪದ್ಯತೋನವವರಂ ಯೋಽಜೀವಯನ್ಮಂಡಪೇ
ಅಶ್ವಾಸ್ಯಾನುಗವಾದಿರಾಜಗುರುರಾಡ್ದದ್ಯಾತ್ಸದಾ ಮಂಗಲಮ್ ೪

ಯೋ ಜಾನುದ್ವಯತೋ ಗಿರಿಂ ಮುನಿವರ್ಯೈಃ ಪೂರ್ಣಂ
ಸ ಗತ್ವಾ ತತೋ
ಗಂಡಕ್ಯಾಹೃತ ಮಲಿಕಾಮಥ ದದೌ ಶ್ರೀ ವೆಂಕಟೇಶಾಯ ಚ
ಅಬ್ದಾರ್ಧಂ ಸಮುಪೋಷ್ಯ ಸದ್ಗುರುವರೋ ಯೋ
ದ್ವಾರಕಾ ಪತ್ತನೇ
ಅಶ್ವಾಸ್ಯಾನುಗವಾದಿರಾಜಗುರುರಾಡ್ದದ್ಯಾತ್ಸದಾ ಮಂಗಲಮ್ ೫

(೧೨೭)

**ಜಯ ಜಯ ಶ್ರೀ ವಾದಿರಾಜ** ಪ

ಜಯ ಜಯ ಆಶ್ರಿತಕಲ್ಪ ಭೂಜ ಅ.ಪ

ದಂಡ ಕಮಂಡಲ ಕರದವನೆ ಭೂ-
ಮಂಡಲದೊಳು ಬಹು ಮೆರೆದವನೆ ಉ-
ದ್ದಂಡ ಖಳರ ಮತ ಮುರಿದವನೆ ಚೆಲ್ವ
ಪುಂಡರೀಕನಯನನ ತೋರ್ದವನೇ ೧

ಭವಭಯ ಮದವನೆ ಮಣಿಸಿದನೆ ಶುದ್ಧ
ಸುವಿವೇಕ ಶಿರೋಮಣಿ ಎನಿಸಿದನೆ ನಮ್ಮ
ಅವನಿಪ ಹಯಾಸ್ಯನ ಭಜಿಸುವನೆ ಎ-
ನ್ನವಗುಣಗಳ ದೂರ ನಿಲಿಸಿದನೇ ೨

ಕವಿ ಜನರಿಗೆ ಸುಖ ಸುರಿಸಿದನೆ ನಿ-
ನ್ನವರವನೆಂದೆನಿಸಿದನೆ ಅಭಿ-
ನವಜನಾರ್ದನ ವಿಠಲನ ಒಲಿಸಿದನೆ ಮನ-
ಕವಿಹಿತರನ ದೂರ ನಿಲಿಸಿದನೇ ೩

(೧೨೮)

**ಜಯಮಂಗಳಂ ನಿತ್ಯ ಶುಭಮಂಗಳಂ** ಪ

ವಾಗೀಶಕರಕಂಜಜಾತನಿಗೆ ಮಂಗಳಂ
ಯೋಗಿಗಳ ಕುಲತಿಲಕಗೆ ಮಂಗಳಂ
ನೀನೆ ಗತಿ ಎಂದನವರತ ಸ್ಮರಿಸುತಲಿದ್ದ
ಭೋಗಿಪುರೀಶನ ರೋಗವ ಕಳೆದಗೆ ೧

ಮಾರುತ ಮತೋದ್ಧಾರಗೆ ಮಂಗಳ
ಮರುತನ ಪದವೇರುವಗೆ ಮಂಗಳ
ಭರತಖಂಡವನೆಲ್ಲ ಪದಚಾರಿಯಾಗಿ
ಚರಿಸಿದ ಮಹಾಮಹಿಮ ಶ್ರೀ ವಾದಿರಾಜರಿಗೆ ೨

ಭೇದ ಪಂಚಕವ ಸಾಧಿಸಿದಗೆ ಮಂಗಳ
ವಾದಿಗಳನೆಲ್ಲ ಗೆಲಿದವಗೆ ಮಂಗಳ
ಸ್ವಾದಿ ಕ್ಷೇತ್ರದಿ ನೆಲೆಸಿ ಪರಿಪರಿ ಮಹಿಮೆಯ
ಮೋದದಿ ತೋರುವ ಗುರುರಾಜತಿಲಕಗೆ ೩

ವಿಜಯಸಾರಥಿಪಾದ ಭಜಿಪಗೆ ಮಂಗಳ
ಕುಜನರ ಗೆಲಿದಗೆ ಶುಭಮಂಗಳ
ಗಜರಾಜರ ವರದನ್ನ ಭಜನೆಯ ಮಾಡುವ
ಸುಜನ ಶಿರೋಮಣಿ ಗುರುಸಾರ್ವಭೌಮರಿಗೆ ೪

ವ್ಯಾಸರ ಸಮ್ಮುಖದೊಳಿರುವಗೆ ಮಂಗಳ
ಹಂಸಾರೂಢಗೆ ಶುಭಮಂಗಳ

ಭಾಸುರಾಂಗ ಶ್ರೀ ಫಣಿಶಾಯಿವಿಠ್ಠಲನ
ದಾಸರೊಳಗುತ್ತಮ ಲಾತವ್ಯ ಗುರುವಿಗೆ ೫

(೧೨೯)

**ಜಯ ಮಂಗಳಂ ನಿತ್ಯ ಶುಭ ಮಂಗಳಂ** ಪ

ಮಂಗಳಂ ಹಯವದನ ಪದಕಂಜ ಮಧುಪನಿಗೆ
ಮಂಗಳಂ ವಾಗ್ವಜ್ರಧಾರನಿಗೆ
ಮಂಗಳಂ ವಾಗೀಶ ಕರಕಂಜಜಾತನಿಗೆ
ಮಂಗಳಂ ಗುರು ವಾದಿರಾಜರಾಯರಿಗೆ ಅ.ಪ

ಮಂಜುಳಾಕಾರನಿಗೆ ಅಗಣಿತ ಗುಣವಂತನಿಗೆ
ಕಂಜದಳ ನೇತ್ರನಿಗೆ ಕಾಮಾರಿಗೆ
ಅಂಜನೆಯಸುತಮತಕೆ ಅನುಕೂಲವಾದವಗೆ
ಕುಂಜರಗಮನ ಯತಿಸಾರ್ವಭೌಮರಿಗೆ ೧

ಪರಿ ಪರಿ ಚರಿತ್ರನಿಗೆ ಪರಿಪೂರ್ಣ ಚಿತ್ಸುಖಿಗೆ
ಪರಮ ಹಂಸಾಚಾರ್ಯ ಪದವೀವಗೆ
ಶರಣ ಜನ ಪಾಲಕಗೆ ಸದ್ಧರ್ಮನಿರತನಿಗೆ
ಉರಗಭೂಷಣನಂತೆ ಉರ್ವಿಯೊಳು ಮೆರೆವವಗೆ ೨

ವಿದ್ವದಾಧಾರನಿಗೆ ವಿಜಿತಾರಿ ವರ್ಗನಿಗೆ
ಅದ್ವೈತ ಮತಹರಗೆ ಆಶ್ಚರ್ಯಗೆ
ಊರ್ಧ್ವ ಪುಂಡ್ರಾಂಕಿತಗೆ ಉತ್ಕೃಷ್ಟ ತೇಜನಿಗೆ
ಮುದ್ದು ಹಯವದನನ ಮುದದಿಂದ ನೆನೆವರಿಗೆ ೩

(೧೩೦)

**ಜೋ ಜೋ ಜೋ ಜೋ ಯತಿಕುಲತಿಲಕ**
ಜೋ ಜೋ ಜೋ ಜೋ ಕವಿಕುಲತಿಲಕ ಪ

ಜೋ ಜೋ ಜೋ ಜೋ ಲಾತವ್ಯದೇವ
ಜೋ ಜೋ ಜೋ ಜೋ ಮಹಾನುಭಾವ ಅ.ಪ

ಲಾತವ್ಯದೇವನೆ ದ್ವಾಪರಯುಗದಿ
ಪ್ರೀತಿಲಿ ಜನಿಸಿದೆ ಹರಿ ಸೇವೆಗಾಗಿ
ಪೃಥ್ವಿಪಾಲಕನ ಪುತ್ರಿ ಇತ್ತಿಹ ಪತ್ರವ
ರತಿಪತಿಪಿತ ಸರ್ವೋತ್ತಮಗಿತ್ತೆ ೧

ಬದರಿಕಾಶ್ರಮದಿಂದ ತ್ರಿವಿಕ್ರಮ ದೇವನ
ಮುದದಿಂದ ತರಿಸಿದೆ ಭೂತನಾಥನಿಂದ
ಬದರಿಯಾತ್ರೆಯ ಫಲ ಇಲ್ಲೇ ದೊರೆಯ-
ಲೆಂದುಪಾಸ್ಯಮೂರ್ತಿಯ ಸ್ಥಿರವಾಗಿ ನಿಲ್ಲಿಸಿದೆ ೨

ನೀನಿದ್ದ ಸ್ಥಳದಲ್ಲಿ ಎಲ್ಲ ತೀರ್ಥಗಳು
ನೀನಿದ್ದ ಸ್ಥಳದಲ್ಲಿ ದೇವ ಸಮೂಹವು
ಎಣೆಯಾಗಿ ನಿಲ್ಲುವದು ಅನುಮಾನವಿನಿತಿಲ್ಲ ೩

ಪಂಚಭೇದ ತಾರತಮ್ಯವ ತಿಳಿಸಿ
ಪಂಚಮುದ್ರೆ ಗೋಪಿ ಚಂದನವ ಧರಿಸಿ
ಪಂಚವೃಂದಾವನದಿ ಸ್ಥಿರವಾಗಿ ನೆಲಸಿ
ಪಂಚಬಾಣನಪಿತನ ಪರಿಪರಿ ಸ್ತುತಿಸಿ ೪

ನಿನ್ನ ಸೇವೆಯಿಂದ ರುದ್ರಾದಿ ಪದವಿಯು
ನಿನ್ನ ಸೇವೆಯಿಂದ ಸಕಲ ಸಂಪದವು
ಪನ್ನಂಗಶಯನನ ಮಹಿಮೆಯ ಪೊಗಳುವ
ಫಣಿಶಾಯಿವಿಠಲನ ಪ್ರೀತಿಯ ದೂತ ೫

(೧೩೧)

ಜಯಮಂಗಳಂ ನಿತ್ಯ ಶುಭಮಂಗಳಂ
ಮಂಗಳಂ ಹಯವದನ ಪದಕಂಜ ಮಧುಪನಿಗೆ
ಮಂಗಳಂ ವಾಗ್ವಜ್ರಧಾರನಿಗೆ ॥ ಪ

ಮಂಗಳಂ ವಾಗೀಶ ಕರಕಂಜಜಾತನಿಗೆ
ಮಂಗಳಂ ಗುರು ವಾದಿರಾಜರಿಗೆ ಅ.ಪ.

ಮಂಜುಳಾಕಾರನಿಗೆ ಮಹಿತ ಗುಣವಂತನಿಗೆ
ಕಂಜದಳ ನೇತ್ರನಿಗೆ ಕಾಮಾರಿಗೆ ॥
ಅಂಜನಿಯ ಸುತ ಮತಕೆ ಅನುಕೂಲವಾದವಗೆ
ರಂಜಿಸಿ ರಾಯರಾಳಿದ ಯತಿಗೇ ೧

ಪರಿಪರಿ ಚರಿತನಿಗೆ ಪರಿಪೂರ್ಣ ಚಿತ್ಸುಖಗೆ
ಪರಮಹಂಸಾರ್ಯರಿಗೆ ಪದವೀವಗೆ ॥
ಶರಣ ಜನ ಪಾಲಕಗೆ ಸುಧರ್ಮದಿ ನಿರತಂಗೆ
ಉರಗಭೂಷಣನಿಂದ ಪೂಜ್ಯನಿಗೆ ೨

ವಿದ್ಯ ಆಧಾರನಿಗೆ ದಿತಿಜಾದ್ರಿ ವಜ್ರನಿಗೆ
ಅದ್ವೈತ ಮತಹರಗೆ ಆಶ್ಚರ್ಯಗೇ ॥
ಊರ್ಧ್ವ ಪುಂಢ್ರಾಂಕಿತಗೆ ಉತ್ಕೃಷ್ಟ ತೇಜನಿಗೆ
ಮುದ್ದು ವ್ಯಾಸವಿಠಲನ್ನ ಪೂಜಿಪನಿಗೆ ೩

(೧೩೨)

**ಮಂಗಳ ಸೋದೆಯ ರಾಜರಿಗೆ ಜಯ-**
**ಮಂಗಳ ವಾದೀಭ ಮೃಗರಾಜರಿಗೆ** ಪ

ಅದ್ವೈತಮತ ವನಪ್ರಧ್ವಂಸಕಾನಳ
ಮಧ್ವ ಮತಾಬ್ಧಿ ಪ್ರಬುದ್ಧ ಚಂದ್ರನಿಗೆ ೧

ಶ್ರೀಮಧ್ವಯಮುಖ ಸ್ವಾಮಿ ಸುಪ್ರೀಯಗೆ
ಕಾಮಿತ ಫಲಪ್ರದ ಕಾಮಧೇನುವಿಗೆ ೨

ನಿರತಿಶಯನು ಹರಿ ಸರ್ವಕ್ಕಧಿಕವಾದ
ಗುರುಗೋವಿಂದವಿಠಲ ಭಕ್ತೇಶನಿಗೆ ೩

(೧೩೩)

**ಮಂಗಳಂ ಗುರು ವಾದಿರಾಜರಿಗೆ ವಾಗೀಶಕರಜಗೆ**
**ಮಂಗಳಂ ಲಾತವ್ಯ ಗುರುಗಳಿಗೆ** ಪ

ಮಂಗಳಂ ಯತಿ ಶ್ರೇಷ್ಠಕರುಣಾಪಾಂಗ ಶ್ರೀಹರಿಪಾದಭೃಂಗನೆ
ಮಂಗಳಂ ಮಹನೀಯ ಎಮ್ಮಭವ ಭಂಗ ಕಳೆ ಶ್ರೀರಂಗಭಕ್ತನೆ
ಭೂತರಾಜನ ರಾಜ ನೀನಹುದೊ ಪ್ರಖ್ಯಾತ ಗುರುವರ
ಮಾತನಾಲಿಸಿ ಎನ್ನ ನೋಡುವುದೋ
ವಾತನಾಗುವ ಬಿರುದು ನಿನ್ನದು ದಾತ ಗುರು **ಲಕ್ಷ್ಮೀಹಯಾಸ್ಯನ**

(೧೩೪)

**ಮಂಗಳಂ ಮಂಗಳಂ ವಾದಿರಾಜಗೆ** ಪ

ಮಂಗಳ ಸುಗುಣ ತರಂಗ ಕೃಪಾಪಾಂಗ ಅ.ಪ

ಮುನಿಕುಲೋತ್ತುಂಗ, ದುರ್ಜನ ಮದಭಂಗ
ಸಜ್ಜನ ಅಂತರಂಗ ಅನಘ ನಿಸ್ಸಂಗ ೧

ಹಯವದನನ ಪಾದದ್ವಯ ಭಜಿಪ ಅಗಾಧ
ದಯಸಾಗರನಾದ ಭಯನಿವಾರಣ ಶ್ರೀದ ೨

ಪವಮಾನನುತ **ಅಭಿನವಜನಾರ್ದನವಿಠಲ**
ಅವನಿಪತಿಯ ಪಾದ ಭಜಿಸುವ ೩

(೧೩೫)

**ಮಂಗಳಂ ಮಂಗಳಂ ಶ್ರೀ ಗುರುರಾಜನಿಗೆ**
ಮಂಗಳಂ ಶರಣರ ಸುರಭೂಜನಿಗೆ ಪ

ವೇದ ವೇದಾಂತದಿ ಮೋದಿಪಗೆ
ಸಾಧುಸಜ್ಜನರನು ಆದರಿಸುವಗೆ

ಮೋದತೀರ್ಥರ ಮತ ಬೋಧಿಪಗೆ
ವಾದದಿ ಬಹು ಶೂರ ವಾದಿರಾಜನಿಗೆ ೧

ಪಂಚ ಬೃಂದಾವನದಿ ಮೆರೆವವಗೆ
ಪಂಚಭೇದಜ್ಞಾನ ನಿಜವೆಂದನಿಗೆ
ಪಂಚಬಾಣನ ಪಿತನ ಸ್ಮರಿಸುವಗೆ
ಮಿಂಚಿನಂದದಿ ಪೊಳೆವ ಮಹಾ ಮಹಾಮಹಿಮನಿಗೆ ೨

ದೇವ ತ್ರಿವಿಕ್ರಮನೆಂದವಗೆ
ಭಾವದಿ ಭಕುತರ ಪೊರೆವವಗೆ
ಕಾವ ಕರುಣಿ ಸಿರಿಕೃಷ್ಣವಿಠಲಪ್ರಿಯ
ಭಾವಿ ಮರುತ ನಮ್ಮ ಭವ್ಯ ಚರಿತನಿಗೆ ೩

(೧೩೬)

ಮಂಗಳ ಶ್ರೀ ಸ್ವಾದಿನಿಲಯನಿಗೆ ಜಯ
ಮಂಗಳ ಶ್ರೀ ಗುರುವಾದಿಗಳರಸನಿಗೆ ಪ

ಪಂಚವೃಂದಾವನದೊಳು ತಾ ಸಂತೆಯ ನೆರಹಿದ ಭಾವಿ
ಪಂಚರೂಪಾತ್ಮನಿಗೆ
ಮಿಂಚಿನಂದದಿ ಭಾವಿ ವಿರಿಂಚನ ಸಹ ತನ್ನ ಜನಕನ
ರಾಜಪ ಕವಿ ಮುನಿಗೆ ೧

ಅರ್ಥಿಯಿಂದ ಪ್ರತಿ ತೀರ್ಥಪ್ರಬಂಧವ ಕೀರ್ತಿಸಿ
ಮೆರೆದ ಅಪ್ರತಿತೀರ್ಥನಿಗೆ
ಸುತ್ತಮುತ್ತ ಸರ್ವ ತತ್ವಪತಿಗಳಿಗೆ ತಾ ಉತ್ತರ
ಪೇಳುವ ಜೀವೋತ್ತಮನಿಗೆ ೨

ಕಾಲಕಾಲಗಳಿಗೆ ಮಹಕಾಲ ನಿಯಾಮಕ ಕಲಿ ಮಾರುತಗೆ
ಫಾಲವದನ ತಂದೆವರದಗೋಪಾಲವಿಠಲನ
ಆಳು ಕೃಪಾಳುಗೆ ೩

(೧೩೭)

**ಮಂಗಳಾವೆನ್ನಿರೊ ಜಗಮಂಗಳ ನಾಯಕಗೆ**
**ಶುಭ ಮಂಗಳಾ ಎನ್ನಿರೋ ಶುಭನಿಧೀಗೆ** ಪ

ಮಂಗಳಾ ಗುರು ವಾದಿರಾಜರಿಗೆ ಜಯಮಂಗಳಾ
ಭಾವಿ ಮುಖ್ಯಪ್ರಾಣ ರಾಜರಿಗೇ ಅ.ಪ

ಮಾಯವಾದಿಗಳ ಗೆದ್ದ ಸ್ವಾದಿಪುರವಾಸಿಗೆ
ವಾದಿರಾಜಾ ಮಧ್ವಮುನಿಗೆ ಜಯಮಂಗಳಾ ೧

ಧವಳಗಂಗಾವಾಸಿಯಾದ ಹಯಗ್ರೀವ ತ್ರಿವಿಕ್ರಮಾ
ವೇದವ್ಯಾಸರ ಪೂಜಿಪಗೆ ಜಯಮಂಗಳಾ ೨

ಭೂತರಾಜರಿಂದ ಸೇವ್ಯಾ ಭೂತಪತಿಗೊಲಿದ
ಗುರು ಲಾತವ್ಯರಾಜರಿಗೆ ಜಯಮಂಗಳಾ ೩

ಹಂಸವಾಹನರೂಢರಾದ ಭಾವಿಭಾರತಿಪತಿರಮಣ
ಹರಿಯ ಪ್ರಥಮಾಂಗಮುಖ್ಯ ಪ್ರತಿಬಿಂಬಗೆ ೪

**ಗುರುತಂದೆವರದಗೋಪಾಲವಿಠ್ಠಲನ** ವಿಹಾರಕ್ಕಾ-
ವಾಸನಾದ ಸುಪ್ರೀತಾ ಘನದೂತಾ ಗುರುವಾದಿರಾಜಗೆ ೫

## ೫. ಪಾರಾಯಣಕ್ಕೆ ಸೂಕ್ತವಾದ ಪದಗಳು

(೧೩೮)

**ಗುರುರಾಜ ಗುರುರಾಜ**
ನೀ ಕಲ್ಕಿಯಿಂದೊಂದಿತ ಗುರುರಾಜ
ಸುತೇಜನಿಂದೊಂದಿತ ಗುರುರಾಜ
ದಾಸನಿಂದೊಂದಿತ ಗುರುರಾಜ
ಧರ್ಮನಿಂದೊಂದಿತ ಗುರುರಾಜ
ಅಧರ್ಮನಿಂದೊಂದಿತ ಗುರುರಾಜ
ವರ್ಚಸ್ಸಿನಿಂದೊಂದಿತ ಗುರುರಾಜ

ಖಷಣನಿಂದೊಂದಿತ ಗುರುರಾಜ
ಸಾಧುಯಿಂದೊಂದಿತ ಗುರುರಾಜ
ಮಹಿಪತಿಯಿಂದೊಂದಿತ ಗುರುರಾಜ
ಸದ್ಧರ್ಮಜ್ಞನಿಂದೊಂದಿತ ಗುರುರಾಜ
ಧರ್ಮಜನಿಂದೊಂದಿತ ಗುರುರಾಜ
ಸಂಪೂರ್ಣನಿಂದೊಂದಿತ ಗುರುರಾಜ
ಶುಚಿಯಿಂದೊಂದಿತ ಗುರುರಾಜ
ವೈಕೃತನಿಂದೊಂದಿತ ಗುರುರಾಜ
ಅಂಜನದಿಂದೊಂದಿತ ಗುರುರಾಜ
ಸರ್ಷಪನಿಂದೊಂದಿತ ಗುರುರಾಜ
ಖರ್ಪಟನಿಂದೊಂದಿತ ಗುರುರಾಜ
ಶ್ರದ್ಧಾಹ್ವನಿಂದೊಂದಿತ ಗುರುರಾಜ
ಸಧ್ಯಾತನಿಂದೊಂದಿತ ಗುರುರಾಜ
ಜ್ಞಾನರಿಂದೊಂದಿತ ಗುರುರಾಜ
ಜ್ಞಾನದಿಂದೊಂದಿತ ಗುರುರಾಜ
ಕೀರ್ತನರಿಂದೊಂದಿತ ಗುರುರಾಜ
ಸಂಕೀರ್ಣಾಖ್ಯನಿಂದೊಂದಿತ ಗುರುರಾಜ
ಕತ್ಥನಿಂದೊಂದಿತ ಗುರುರಾಜ
ಮಹಾಬುದ್ಧಿಯಿಂದೊಂದಿತ ಗುರುರಾಜ
ಮಹತ್ತಾರನಿಂದೊಂದಿತ ಗುರುರಾಜ
ಸುವೀರ್ಯನಿಂದೊಂದಿತ ಗುರುರಾಜ
ಮೇಧಾವಿಯಿಂದೊಂದಿತ ಗುರುರಾಜ
ವಿಜಯನಿಂದೊಂದಿತ ಗುರುರಾಜ
ಜಯನಿಂದೊಂದಿತ ಗುರುರಾಜ
ಪ್ರಮೋದನಿಂದೊಂದಿತ ಗುರುರಾಜ
ಮನುಯಿಂದೊಂದಿತ ಗುರುರಾಜ
ಮೋದನಿಂದೊಂದಿತ ಗುರುರಾಜ
ಸಂತಸನಿಂದೊಂದಿತ ಗುರುರಾಜ
ಸಂತುಷ್ಟನಿಂದೊಂದಿತ ಗುರುರಾಜ
ಚಾರ್ವರಿನಿಂದೊಂದಿತ ಗುರುರಾಜ
ಚಾರುಯಿನಿಂದೊಂದಿತ ಗುರುರಾಜ

ಸುಬಾಹುವಿನಿಂದೊಂದಿತ ಗುರುರಾಜ
ಚಾರುಪದನಿಂದೊಂದಿತ ಗುರುರಾಜ
ಸುಲೋಚನನಿಂದೊಂದಿತ ಗುರುರಾಜ
ಸಾರಸ್ವತನಿಂದೊಂದಿತ ಗುರುರಾಜ
ಸುವೀರನಿಂದೊಂದಿತ ಗುರುರಾಜ
ಪ್ರಾಜ್ಞನಿಂದೊಂದಿತ ಗುರುರಾಜ
ಕಪಿಸನಿಂದೊಂದಿತ ಗುರುರಾಜ
ಅಲಂಪಟನಿಂದೊಂದಿತ ಗುರುರಾಜ
ಸರ್ವಜ್ಞನಿಂದೊಂದಿತ ಗುರುರಾಜ
ಸರ್ವಜಿತನಿಂದೊಂದಿತ ಗುರುರಾಜ
ಮಿತ್ರನಿಂದೊಂದಿತ ಗುರುರಾಜ
ಪಾಪವಿನಾಶನಿಂದೊಂದಿತ ಗುರುರಾಜ
ಧರ್ಮವಿನೀತನಿಂದೊಂದಿತ ಗುರುರಾಜ
ಶಾರದನಿಂದೊಂದಿತ ಗುರುರಾಜ
ಓಜಿಸಿನಿಂದೊಂದಿತ ಗುರುರಾಜ
ಸುತಪಸ್ವಿಯಿಂದೊಂದಿತ ಗುರುರಾಜ
ತೇಜಸ್ವಿಯಿಂದೊಂದಿತ ಗುರುರಾಜ
ದಾನಸುಶೀಲರಿಂದೊಂದಿತ ಗುರುರಾಜ
ಯಜ್ಞಾತಾ ಕರ್ತರಿಂದೊಂದಿತ ಗುರುರಾಜ
ಯಜ್ವೇಯಿಂನಿಂದೊಂದಿತ ಗುರುರಾಜ
ಯೋಗವರ್ತಕನಿಂದೊಂದಿತ ಗುರುರಾಜ
ಪ್ರಾಣನಿಂದೊಂದಿತ ಗುರುರಾಜ
ತ್ರಾಣನಿಂದೊಂದಿತ ಗುರುರಾಜ
ಅಮರ್ಷೀಮನಿಂದೊಂದಿತ ಗುರುರಾಜ
ಉಪದೇಷ್ಟನಿಂದೊಂದಿತ ಗುರುರಾಜ
ತಾರಕನಿಂದೊಂದಿತ ಗುರುರಾಜ
ಕಾಲಕ್ರೀಡನಿಂದೊಂದಿತ ಗುರುರಾಜ
ಸುಕಾಲಜ್ಞನಿಂದೊಂದಿತ ಗುರುರಾಜ
ಕಾಲಸುಸೋಚಕನಿಂದೊಂದಿತ ಗುರುರಾಜ
ಕಲಿಸಂಹರ್ತನಿಂದೊಂದಿತ ಗುರುರಾಜ
ಕಲಿಯಿಂದೊಂದಿತ ಗುರುರಾಜ

ಕಾಲಕನಿಂದೊಂದಿತ ಗುರುರಾಜ
ಸ್ವಾಮರೇತನಿಂದೊಂದಿತ ಗುರುರಾಜ
ಸದಾರತನಿಂದೊಂದಿತ ಗುರುರಾಜ
ಸುಬಲನಿಂದೊಂದಿತ ಗುರುರಾಜ
ಸಂಮೋಹಿನಿಂದೊಂದಿತ ಗುರುರಾಜ
ಸದಾಗತಿಯಿಂದೊಂದಿತ ಗುರುರಾಜ
ಗಮ್ಯನಿಂದೊಂದಿತ ಗುರುರಾಜ
ಜ್ಞಾನನಿಂದೊಂದಿತ ಗುರುರಾಜ
ದಶಕುಲನಿಂದೊಂದಿತ ಗುರುರಾಜ
ಶ್ರೋತವ್ಯನಿಂದೊಂದಿತ ಗುರುರಾಜ
ಸಂಕೀರ್ತಿಕವ್ಯನಿಂದೊಂದಿತ ಗುರುರಾಜ
ಮಂತವ್ಯನಿಂದೊಂದಿತ ಗುರುರಾಜ
ಕವ್ಯನಿಂದೊಂದಿತ ಗುರುರಾಜ
ಸೇವ್ಯನಿಂದೊಂದಿತ ಗುರುರಾಜ
ಸುಭವ್ಯನಿಂದೊಂದಿತ ಗುರುರಾಜ
ಸ್ವರ್ಗವ್ಯನಿಂದೊಂದಿತ ಗುರುರಾಜ
ಭಾವ್ಯನಿಂದೊಂದಿತ ಗುರುರಾಜ
ಜ್ಞಾತವ್ಯನಿಂದೊಂದಿತ ಗುರುರಾಜ
ವಕ್ತವ್ಯನಿಂದೊಂದಿತ ಗುರುರಾಜ
ಗವ್ಯನಿಂದೊಂದಿತ ಗುರುರಾಜ
ಲಾತವ್ಯನಾಗಿ ನಿಂದೊಂದಿತ ಗುರುರಾಜ
ವೃಂದಾವನದಾಕಾರನಾಗಿರುವನಿಂದೊಂದಿತ ಗುರುರಾಜ
ವಾಯು ಬ್ರಹ್ಮ ಬ್ರಾಹ್ಮಣ ಪ್ರಿಯನಾಗುವನಿಂದೊಂದಿತ ಗುರುರಾಜ
ಸರಸ್ವತಿಪತಿಯಾಗುವನಿಂದೊಂದಿತ ಗುರುರಾಜ
ಮಾಂಪಾಹಿ ಮಾಂಪಾಹಿ ಶ್ರೀನಿಂದೊಂದಿತ ಗುರುರಾಜ
ಯಮ್ಮ ಹಿರಿಯರಾಡಿದ ನುಡಿಗಳಿಂದಲೇ ನಿನ್ನ
ಕೊಂಡಾಡಿದೆನೋ ಗುರುರಾಜ
ಯನ್ನಪರಾಧ ಅನಂತ ಕ್ಷಮಿಸುತಿರು ಕ್ಷಣಕ್ಷಣಕೆ ಗುರುರಾಜ
ವಾರುಣೀಪತಿ ಬಿಂಬ ಹನುಮ ಭೀಮಾನಂದ ಮುನಿ ನಿಲಯ
ಗುರು ತಂದೆವರದಗೋಪಾಲವಿಠ್ಠಲನ ಉದ್ದಂಡದೂತ
ಯನಗೆ ತಂದೆ ತಾಯಿ ಸಕಲ ಬಂಧು ಬಳಗವು ನೀನೆ ಗುರುರಾಜ

ವಂದು ಕಾಣದ ಮಂಗ ನಾನಾದೆಯಿಂದು ಗುರುರಾಜ
ಹೊತ್ತು ಹೋಯಿತು ವ್ಯರ್ಥ ನಿನ್ನ ಕಾಣದಲೆ ಯನಗೆ ಗುರುರಾಜ
ಎತ್ತಿದ್ದರೇನು ನಿನಗಲ್ಲದವನು ಗುರುರಾಜ
ಶ್ರೀ ಮಧ್ವಶಾಸ್ತ್ರವ ತಿಳಿಸಿ ಉದ್ಧರಿಸು ಯನ್ನ ಗುರುರಾಜ
ಸದ್ಭಕ್ತರಲಿಯಿಟ್ಟು ಕಾಪಾಡುಯನ್ನ ಗುರುರಾಜ
ತ್ವದ್ಭಕ್ತನಾ ಮಾಡಿಕೊ ತವದಾಸ್ಯ ಕೊಟ್ಟೆನಗೆ ಗುರುರಾಜ
ಹೇಡಿ ಜೀವನನಾಗಿ ನಾನಿನ್ನ ಮರೆತೆ ಗುರುರಾಜ
ಯೇನು ಮಾಡಲು ವಲಿವೆ ನೀ ಯನಗೆ ಗುರುರಾಜ
ನಾನೆಂಬೊ ಭಗವದ್ರೂಪದಿಂ ಸಂಸ್ಕೃತಿಯ ನೀಡೆಲೊ ಎನಗೆ ಗುರುರಾಜ
ನಾನೆಂಬ ಸ್ಮೃತಿಯ ನೀಡದಿರೆನಗೆ ಗುರುರಾಜ
ನಾನು ನನ್ನದು ಎಲ್ಲ ನಿನ್ನ ಪರವಾಗಲೀ ಗುರುರಾಜ
ಯಂದು ಶ್ರೀಹರಿಯ ಶಿರಿಸಹ ತೋರುವಿಯಾ ಯನಗೆ ಗುರುರಾಜ
ಯೆಂದೆಂದು ಸ್ಮೃತಿಯಲ್ಲಿ ನೀನಿದ್ದು ತಿಳಿಸುತಿರು ಗುರುರಾಜ
ನಿನ್ನ ನಿನ್ನವರಲ್ಲಿ ಯೆಂದೆಂದು ದ್ವೇಷವಾ ಕೊಂಡಾದಿರೆಸಗೆ ಗುರುರಾಜ
ನಿನ್ನ ಶ್ರೀಪಾದ ರಜದಲ್ಲಿ ನೀ ತೋರೋ ಎನಗೆ ಗುರುರಾಜ
ಶ್ರೀ ಕೃಷ್ಣಾರ್ಯ ಗುರುವಿನಲಿ ನೀ ತೋರೋ ಎನಗೆ ಗುರುರಾಜ
ಸತತ ಯಲ್ಲೆಲ್ಲು ಪೊಳೆಯುತಿರು ಯನಗೆ ಗುರುರಾಜ
ಯಾಕಿಷ್ಟು ನಿರ್ದಯ ಯನ ಮ್ಯಾಲೆ ನಿನಗೆ ಗುರುರಾಜ
ತಂದೆ ವರದರಾಜರ ಅತ್ಯಾಪ್ತ ಸಖನೆಂದು ಸಲಹೊ ಗುರುರಾಜ
**ಗುರುತಂದೆವರದಗೋಪಾಲವಿಠ್ಠಲ**ನ ಪರಿವಾರ ಸಹ
ಬಂದು ತೋರೆನ್ನ ಮನದಲ್ಲಿ ಗುರುರಾಜ

ಟಿಪ್ಪಣಿ : ಈ ಹಾಡಿನಲ್ಲಿ ೧೦೦ ಜನ ಋಜುಗಣದವರ ಹೆಸರುಗಳು ಆರೋಹಣ ಕ್ರಮದಲ್ಲಿ (ಕಲ್ಕಿಯಿಂದ ಬ್ರಹ್ಮದೇವರವರೆಗೆ) ಕೊಟ್ಟಿದ್ದು ಆ ಕಾರಣದಿಂದ ಈ ಹಾಡನ್ನು ಸೇರಿಸಲಾಗಿದೆ. ಹೆಸರುಗಳು ಬಂದ ಕ್ರಮದಲ್ಲಿ ತುಸು ಹೆಚ್ಚು ಕಡಿಮೆ ಇದೆ.

(೧೩೯)

**ವೃಂದಾವನ ವೃಂದಾವನ ವೃಂದಾವನ ಪಂಚವೃಂದಾವನ** ಪ

ವೃಂದಾವನ ವೃಂದಾವನ ವೃಂದಾವನ ಶುಭವೃಂದಾವನ

ಸೋದಾ ಕ್ಷೇತ್ರದಿ ರಾಜಿಸುತ್ತಿರುವ ವೃಂದಾವನ
ವಾದಿರಾಜಗುರುಸಾರ್ವಭೌಮರ ವೃಂದಾವನ
ಬೇಡಿದವರ ಇಷ್ಟಾರ್ಥ ಕೊಡುತಿಹ ವೃಂದಾವನ
ಈಡು ಇಲ್ಲದ ಮಹಿಮೆಯೊಳ್ಮೆರೆಯುವಂಥ ವೃಂದಾವನ
ಕುಷ್ಟರೋಗವ ನಷ್ಟಗೈಯುವ ವೃಂದಾವನ
ಕಷ್ಟಗಳೆಲ್ಲವ ಪರಿಹಾರ ಮಾಡುವ ವೃಂದಾವನ
ತ್ರಿವಿಕ್ರಮದೇವರ ಪ್ರತಿಷ್ಠಾಪಕರ ವೃಂದಾವನ
ಭಾವುಕ ಜನರ ಭಾವಿಮರುತರ ವೃಂದಾವನ
ಕಾಮಧೇನು ಕಲ್ಪವೃಕ್ಷಕೆ ಮಿಗಿಲಾದ ವೃಂದಾವನ
ಕಾಮನಯ್ಯನ ಪ್ರೇಮಕೆ ಪಾತ್ರರ ವೃಂದಾವನ
ಮೂಕ ಬ್ರಾಹ್ಮಣಗೆ ನಾಕೇಶ ಪದವಿತ್ತ ವೃಂದಾವನ
ಮುಕ್ಕೋಟಿ ದೇವತೆಗಳು ಬಿಡದೆ ಸೇವಿಪ ವೃಂದಾವನ
ಸುಂದರ ಶುಭತಮ ಮಂದಿರಸ್ಥಿತ ವೃಂದಾವನ
ವಂದಿಪ ಜನರಘವೃಂದವ ಕಳೆವ ವೃಂದಾವನ
ಮೋದತೀರ್ಥಮತ ಸಾಧಿಸಿ ಮೆರೆವಂಥ ವೃಂದಾವನ
ಮೋದತೀರ್ಥರೆ ಮುಂದೆ ಆಗುವ ಶುಭ ವೃಂದಾವನ
ಪಂಚಗಂಗ ನಿರ್ಮಾಣವ ಮಾಡಿದ ವೃಂದಾವನ
ಸಂಚಿತಾಗಮಗಳೆಲ್ಲವ ಕಳೆವ ವೃಂದಾವನ
ಕೃಷ್ಣತೃತೀಯದ ಫಾಲ್ಗುಣ ಬಹುಳದಿ ವೃಂದಾವನ
ಕೃಷ್ಣನ ನೆನೆಯುತ ಪ್ರವೇಶಗೈದಿಹ ವೃಂದಾವನ
ಅನುಮಾನವಿನಿತಿಲ್ಲ ಮನೋಭೀಷ್ಟ ಸಲಿಸುವ ವೃಂದಾವನ
**ಫಣಿಶಾಯಿ**ವಿಠಲನ ಭಕ್ತೋತ್ತಮರ ವೃಂದಾವನ

(೧೪೦)

**ಶರಣು ನಿಮ್ಮ ಚರಣಗಳಿಗೆ ವಾದಿರಾಜರೆ**
ಕರುಣೆಯಿಂದ ಪೊರೆವ ನಮ್ಮ ವಾದಿರಾಜರೆ
ಗುರುವಾಗೀಶರ ದಯಾಪಾತ್ರ ವಾದಿರಾಜರೆ
ಗೌರಿಗದ್ದೆಯಲ್ಲಿ ಬಂದ ಸ್ವಾದಿರಾಜರೆ
ತೀರ್ಥಯಾತ್ರೆ ಮಾಡಿ ಬಂದ ವಾದಿರಾಜರೆ
ತೀರ್ಥಪ್ರಬಂಧದ ಗುರು ಸ್ವಾದಿರಾಜರೆ
ಲಕ್ಷ್ಮೀಸುತಮಾತೆ ವಾದಿರಾಜರೆ

ಲಕ್ಷಾಭರಣಮನೆ ಯಿತ್ತ ಸ್ವಾದಿರಾಜರೆ
ಲಕ್ಷ್ಮೀಶೋಭಾನ ಮಾಡಿದಂಥ ವಾದಿರಾಜರೆ
ರುಕ್ಮೀಣೀಶವಿಜಯ ಕೊಟ್ಟ ಸ್ವಾದಿರಾಜರೆ
ಯುಕ್ತಿಮಲ್ಲಿಕಾ ಮಾಲೆಯನು ಕೊಟ್ಟ ವಾದಿರಾಜರೆ
ಮುಕ್ತಿಗೊಡೆಯನ ಧರಿಸಿದಂಥ ವಾದಿರಾಜರೆ
ವೈಕುಂಠವ ವರ್ಣಿಸಿದ ವಾದಿರಾಜರೆ
ಶ್ರೀಕಾಂತನ ಒಲುಮೆ ಪಾತ್ರ ಸ್ವಾದಿರಾಜರೆ
ಭೂತರಾಜರಾ ಗುರು ವಾದಿರಾಜರೆ
ಪೋತನನ್ನು ಉಳುಹಿದಂಥ ವಾದಿರಾಜರೆ
ಪ್ರಾಕೃತ ಕೃತಿಗಳಲ್ಲಿ ವಾದಿರಾಜರೆ
ಅಪ್ರಾಕೃತ ಹರಿಯ ಭಜಿಸಿದ ವಾದಿರಾಜರೆ
ಸ್ವಪ್ನಪದ ಗುಂಡಕ್ರಿಯೆಯ ವಾದಿರಾಜರೆ
ಸ್ವಪ್ನದಲ್ಲಿ ಅರುಹಿದಾ ವಾದಿರಾಜರೆ
ಹತ್ತು ಹಲವು ಗ್ರಂಥ ರಚಿಸಿದ ವಾದಿರಾಜರೆ
ಹಯಗ್ರೀವ ಹರಿಯ ಕಂಡ ವಾದಿರಾಜರೆ
ತ್ರಿವಿಕ್ರಮನ ತಂದ ವಾದಿರಾಜರೆ
ಹರುಷದಿಂದ ಪಾಡಿದಂಥ ಸ್ವಾದಿರಾಜರೆ
ಪಂಚರೂಪ ಹರಿಯ ಸ್ತುತಿಪ ವಾದಿರಾಜರೆ
ಪಂಚವೃಂದಾವನದಿ ಕುಳಿತ ಸ್ವಾದಿರಾಜರೆ
ವರಾಹಹರಿವಿಠ್ಠಲರೇಯ ವಾದಿರಾಜರೆ
ಕರವ ಪಿಡಿದು ಸಲಹಿರಿ ವಾದಿರಾಜರೆ

## ೬. ಭೂತರಾಜರ ಸ್ತುತಿ ಪದಗಳು

(೧೪೧)

**ಅಲಘು ಮಹಿಮ ಭಾವೀ । ತ್ರಿನಯನಾ**
ಮಲಿನ ಮನವ ಕಳೆಯೋ ಪ

ಅಲಘು ಮಹಿಮ ಭಾವೀ ಮರುತ
ಜಲಜ ಪಾದಕ್ಕಳಿಯೆ ಮುಖ್ಯ ಅ.ಪ.

ಶಿರಸು ಭೂಷ ರಕ್ತ ವಸನ
ಕರ್ಣಗಳಲಿ ಮಣಿಯ ಕುಂಡಲ
ಕರ ಅಧರ ಪಾಣಿ ಪಾದ
ವರ ಸುಕುಸುಮ ಬಂದೂಕ ಭಾಸ ೧

ಉದಿತ ರವಿಯ ಅರುಣ ದೇಹ
ವಿಧ್ರುತ ಚಾಪ ಶರವು ಕರದಿ
ಅದುಭುತಾತ್ಮ ನಾರಾಯಣನ
ವಿಧಿತ ಮಹಿಮನಾಗಿ ನಮಿಪ ೨

ಕರ್ಣ ಭೂತ ಮುಖ್ಯ
ಗಣಗಳಿಂದ ಕೂಡಿ ಭೂತ
ಗಣಾಧೀಶನಾಗಿ ನಾರಾ-
ಯಣನ ನಾಮ ಧರಿಸಿ ಮೆರೆವ ೩

ಮಣಿಯನೇಕ ಚೀರ್ಣ ಮೌಳಿ
ಅನುಣಾರ್ಣವೇಂದು ಮೌಳಿ
ಕ್ಷಣಿತ ಢಮರು ಕರ ತ್ರಿಶೂಲಿ
ಮಣಿವೆ ಹರಿಯ ಭಕ್ತ ಮೌಳಿ ೪

ಸ್ವಾಪ ಮುನ್ನ ಮುಂದೆ ಕುಳಿತು
ಉಪಾಂಸ್ವನೇಕ ಉಚ್ಚರಿsಸಿ
ಗೋಪತಿ **ಗುರುಗೋವಿಂದವಿಠಲ**
ಸುಪಾದ ಭಜಿಸೆ ಪೋದೆ ತ್ವರ್ಯ ೫

(೧೪೨)

**ಭಜಿಸಿ ಬದುಕಿರೋ ದಿವ್ಯ ಪಾದಕೆರಗಿರೊ**
ಭಕುತಿಯಿತ್ತು ಪೊರೆವೊ ಭೂತರಾಜರೆಂಬರಾ ಪ

ಭಾವ ಶುದ್ಧದಿ ಓದಿ ಗ್ರಂಥಸಾರವಾ
ವಾದಿರಾಜರ ಕೂಡಿ ತಾನು ವ್ಯಾಸ ಮುನಿಯಲಿ ೧

ಅಷ್ಟ ಮಂದಿಯಾ ಅಮೃತವೃಷ್ಟಿಗರೆವರೂ
ಶ್ರೀಕೃಷ್ಣಮಹಿಮೆಯ ತಾವು ಕೂಡಿ ಪಾಡೊರೊ ೨

ತಂದೆ ಎಂಬೊದೊ ತಾನ ಒಂದನರಿಯದೆ
ನಿಂದೆ ಮಾಡಿ ತಾನೆ ಬಲುಕುಂದಿಗಳುಕುವಾ ೩

ಶಿಷ್ಟ ಜನರೊಳು ಇವನೇ ಶ್ರೇಷ್ಠವೇನಿದೂ
ಸಿಟ್ಟಿನಿಂದ ಬೈದು ಬಹು ಕಷ್ಟಬಡುವನೊ ೪

ಭಂಡಿ ಮನುಜನೇ ಪ್ರಚಂಡ ತಪಶಿಯೋ
ಕೆಂಡ ತುಳಿದು ವ್ಯರ್ಥ ನೀನು ದಂಡಕಳುಕುವಿ ೫

ಏನು ಪೇಳಲಿ ಇನ್ನೇನು ಹೇಳಲೀ
ಜ್ಞಾನ ಶೂನ್ಯನಂತೆ ಶಿಕ್ಕಿ ನುಡಿಯ ಬ್ಯಾಡಲೋ ೬

ಖಿಲ್ಲ ಕೇಳಲೋ ಎಲೋ ಫಲ್ಲ ತೊಡದಿರೋ
ನಿಗಮವೆಲ್ಲ ಪೇಳಿಸುವಾ ಕಲ್ಲಿನಿಂದಲೇ ೭

ಶರಣು ಪೊಕ್ಕೆನೊ ಸ್ವಾಮಿ ಮರೆಯ ಪೊಕ್ಕೆನೊ
ಕರುಣ ಮಾಡಿರೀ ಕಂಣು ತೆರೆದು ನೋಡಿರೀ ೮

ಭೂತ ಹರಣವಾ ತಾಳೋ ಭೀತಿಗೊಳಿಸುತಾ
ಪಾಪ ಪೋಪುದೂ ಯನ್ನ ಪಾದ ಸೋಂಕಲೂ ೯

ಭೀತಿಗೊಳಿಸುತಾನೇಕ ಭೂತ ಪ್ರೇತಕೇ
ರಾಜನಾಗಿ ನೀನು ಭೂತಪ್ರೇತ ಗಣದೊಳು ೧೦

ನಂದಿವಾಹನಾ ಪದಕೆ ಮುಂದೆ ಬಾಹುವೀ ಯನ್ನ
ಕಂದ ನೀನು ನಾನೇ ಭಾವಿ ಮಂದಜಾಸನಾ ೧೧

ಪಂಚವೃಂದದೀ ಸದ್ವೃಂದ ಪೂಜ್ಯನಾ
ದ್ವಂದ್ವ ಪೊಂದಿ ತಾನು ಸ್ವಾನಂದ ಪಡೆದನೂ ೧೨

ಸ್ವಾದಿನಿಲಯನಾ ಬಲು ಪ್ರೀತಿ ಪಡೆದು ತಾ
ತ್ರಿಶೂಲ ಧರಿಸಿದಾ ಭಾವಿ ಶೂಲ ರಮಣನೂ ೧೩

ಪ್ರಾಣ ಪತಿಯನಾ ರೇಣು ಪಾದ ಫಣಿಯಲೀ
ಪ್ರಾಣಿ ನಿಡದನಾ ಅವನ ಪ್ರಾಣ ಸೆಳೆವನಾ ೧೪

ಎಂತು ಪೇಳಲೀ ಇವರ ಅಚಿಂತ್ಯಮಹಿಮೆಯಾ
ಶಾಂತಮೂರುತಿ ಶಶಿಕಾಂತ ಕೀರುತೀ ೧೫

ದುಷ್ಟಜನರನಾ ಬಲು ಘಾಸಿಗೊಳಿಸಿದಾ
ಶಕ್ತಿದಾಯಕ **ತಂದೆವರದಗೋಪಾಲವಿಠಲನು** ೧೬

(೧೪೩)

**ಭೀತಿಯನ್ನು ಬಿಡಿಸು ಬೇಗ ಭೂತರಾಜನೆ** ಪ

ಭಕ್ತಿಯಿಂದ ಬಾಗಿ ನಮಿಪೆ ಖ್ಯಾತಿವಂತನೆ ಅ.ಪ.

ಕಾಮಬಾಧೆ ಕಡಿಮೆ ಮಾಡು ಭಾರಿ ಕಾಮಹರನೆ
ರಾಮಧ್ಯಾನಿ ನೀಡು ವಾಮನ ದೇವನೆ ೧

ಮರುತದ ಸಾರ ತಿಳುಹು ಗರಳಧಾರಿಯೇ
ಕರವ ಮುಗಿದು ಬೇಡುವೆನು ತ್ವರಿತದಿಂದಲಿ ೨

**ತಂದೆವರದವಿಠಲನ್ನ** ಹೃನ್ಮಂದಿರದೊಳ್
ಛಂದದಿಂದ ತಂದು ತೋರೋ ಇಂದುಶೇಖರ ೩

(೧೪೪)

**ಭೂತಪತೇ – ಭೂತಪತೇ** ಪ

ಭೂತಿ ಮಹತ್ ಶ್ರುತಿ । ಪಾದ್ಯವೆನಿಪ ಹರಿ
ದೂತ ಭ್ರಾತ ಮಹ । ಭೂತ ಗಣಾಧಿಪ ಅ.ಪ.

ಕರ್ಣ ವಿಕರ್ಣರು । ಘನ್ನ ಗುಣಸಂ –
ಪನ್ನ ಮಹಿಮ ಮನ । ಬನ್ನವ ಕಳೆಯೋ ೧

ರುಂಡ ಮಾಲೆ ಧರ । ಚಂಡ ಶಿವನ ಪದ
ಕೊಂಡೆ ವಾದಿಗಜ । ಸಿಂಹರೆನಿಪರಿಂ ೨

ಗುರುವಾಣತಿ ಧೃತ । ಶಿರದಿ ಬದರಿಯಿಂ
ಹರಿ ಪ್ರತಿಮೆ ಸಹಿತ । ಶಿರನೀತ ವಿಮಾನ ೩

ಬಂದುಕ ಕುಸುಮಗ । ಳಿಂದ ಅಲಂಕೃತ
ಸುಂದರಾಂಗ ಮನ । ಬಂಧಿಸು ಹರಿಯಲಿ ೪

ಬಿಂಬನು **ಗುರುಗೋವಿಂದವಿಠಲ** ಪದ
ಡಿಂಬದಿ ಕಾಂಬುವ । ಹಂಬಲವೀಯೋ ೫

(೧೪೫)

**ಭೂತರಾಜ ನಮಿಪೇ ಜಯಜಯ ಮಹದ್ಭುತ**
ತ್ರಿವಿಕ್ರಮನ ರಥಸಹಿತ ತಂದಂಥ ಪ

ಶ್ರೀ ವಾದಿರಾಜರ ದೂತದೊಳು ಖ್ಯಾತನಾಮರ
ನೆನೆವೆ ನಾನಿತ್ಯ ಅ.ಪ

ಕ್ಷೇತ್ರಪಾಲರೆ ಸರ್ವಸುಜನರ ಗಾತ್ರವೇ
ಕ್ಷೇತ್ರವೆಂತೆಂದು ನಾ ಪ್ರಾರ್ಥಿಸುತಿರುವೆನೊ
ಸ್ತೋತ್ರ ಕೈಕೊಂಡವರ ಗಾತ್ರ ನಿರ್ಮಲ ಮಾಡಿ
ಪಾತ್ರರಾಗಿಸಿರಿಹಪರದ ಸುಸಾಧನಕೇ ೧

ವೃಂದಾವನಾಚಾರ್ಯರ ಸಂರಕ್ಷಿಸುತ
ಅವರ ಬಂಧ ಭಯಕ್ಲೇಶಗಳ ಪರಿಹರಿಸುತ
ಬಂದ ಭಕ್ತರ ದುರಿತ ನಾಶವನೆ ಮಾಡುತಾ-
ನಂದದಿ ಶ್ರೀಗುರುವಡಿಗರ್ಪಿಸುವಿರೀ ೨

ಶ್ರೀವಾದಿರಾಜರ ಚರಣಸೇವೆಯನು ನೀಡಿ
ಬಾಧಿಪ್ಪ ದುರಿತಗಳ ನಾಶ ಮಾಡಿ
ಶ್ರೀಧವ ಶ್ರೀ ಮುದ್ದುವಿಠಲನ ನಾಮಸ್ಮರಣೆ
ಎನ್ನ ಮರಣ ಕಾಲಕೆ ನೀಡಿ ಕರುಣಿಸೆನುತಾ ೩

(೧೪೬)

ಭೂತನಾಥ ಪಾಲಿಸೆನ್ನ ನಾರಾಯಣ
ಭೂತನಾಥನೆ ಪಾಲಿಸೆನ್ನ ಪ

ಕರ್ಣವಿಕರ್ಣಾದಿಗಣಗಳಿಂದಲಿ ಕೂಡಿ
ಸ್ವರ್ಣಾದಿ ಭಾಸುರಾಂಗ ಶ್ರೀ ರಾಜರ
ಸ್ವರ್ಣದ ಪಾಲಕಿಯನ್ನು ಮುಂಭಾಗದಿ
ಭಕುತಿಯಿಂದಲಿ ಪೊತ್ತ ಶ್ರೀ ಭೂತರಾಜ ೧

ಬದರಿಕಾಶ್ರಮದಿಂದ ನದಿಯ ತಾತನ ದಿವ್ಯ
ಸದನವ ಶ್ರೀ ಸೋದಾಕ್ಷೇತ್ರಕ್ಕೆ ತರಲು
ಬೆದರದೆ ವಿಘ್ನವ ತಂದ ದೈತ್ಯನ ರಥ
ಚಕ್ರದಿಂದಲಿ ಕೊಂದು ರಥವ ಬೇಗದಿ ತಂದೆ ೨

ಧನಪನ ಕೋಶದೊಳಿಪ್ಪ ಮೌಳಿಯ ವೇಗ –
ದಿಂದಲಿ ನೀ ತಂದು ವಾದಿರಾಜರಿಗಿತ್ತೆ
ಅನುಮಾನವಿಲ್ಲದೆ ತಂದು ಶ್ರೀರಾಜೇಶ
ಹಯಮುಖನ ಚರಾಗ್ರಣಿಯಾಗಿ ಮೆರೆದೆ ೩

(೧೪೭)

ವಾದಿರಾಜರ ದೂತನೆನಿಸುವ ಭೂತರಾಜನೆ
ಮೇದಿನಿಯೊಳು ನಿನ್ನ ವಿಖ್ಯಾತಿಯನು ಕೇಳಿ
ಕೃಪೆಯ ಮಾಡೆಂದು
ಆದಿಯಲಿ ಗುರು ಆಜ್ಞೆ ಮಾಡಲು
ಮೋದದಿಂದಲಿ ವಹಿಸಿ ಶಿರಸಾ
ಬದರಿಕಾಶ್ರಮಕ್ಹೋಗಿ ತಂದೆಯೊ ಗುಡಿಸಹ ತ್ರಿವಿಕ್ರಮನ ೧

ವೇದವಿನುತನ ತಂದ ಕಾರಣ ನಿನ್ನ ಮ್ಯಾಲತಿ ಪ್ರೀತಿ ಇವರಿಗೆ
ಸಾಧಿಸ್ಟೇಳ್ಳೆ ಶ್ರೀನಿವಾಸನ ದಾಸ ದಾಸರ ದಾಸ ನಾನೆನುತ
ಬಂದ ವಾರ್ತೆಯ ಪೇಳಿ ಗುರುಗಳ ಕರಾರ-
ವಿಂದದಿಂದಭಯ ನೀಡಿ ಸುಭಾವಿ
ಇಂದುಮೌಳಿ ಶಿಖರ ಬಾಗಿದೆ ಲಾಲಿಸೀ ನುಡಿಯ ೨

**ಕೃಷ್ಣವಿಠಲನ** ಕರುಣದಿಂದಲಿ ಇಷ್ಟೆ ತುತಿಸಿದೆ ಬುದ್ಧಿ ಸಾಲದು
ವಿಶಿಷ್ಟ ನಿನ್ನ ಮಹಿಮೆಯನು ಪೇಳುವ ಭಾವಿ ಬಿಡೌಜ
ಸಿಟ್ಟು ಮಾಡಲಿ ಬ್ಯಾಡ ಕರುಣಾ
ದೃಷ್ಟಿಯಿಂದಲಿ ನೋಡು ನಿನಗೆ ಸಾ-
ಷ್ಟಾಂಗ ನಮಿಸುವೆ ಅಭಯ ಕೊಡು ಅಭೀಷ್ಟದಾಯನೆ ೩

(೧೪೮)

**ಶತ್ರುಭಯ ಪರಿಹರಿಸೊ ಭೂತರಾಜ** ಪ

ಭವಕೆ ಭೀಕರ ಭಾವಿ ಭೀಮನ
ಭಜಿಪ ಭೋಜಾ ಸುತೇಜಾ ಅ.ಪ.

ಇಂದು ಅರಿಯದೆ ಇಂದು ನೀನೆ ನಾನೆಂದು
ಕಮರಿ ಕೂಪದಿ ನೊಂದೆನೊ
ಭಾವಿ ನಂದಿವಾಹನ ಮಂಗಳಪ್ರದ ನೀಲಕಂಠಾ ೧

ಇಲ್ಲೆಲ್ಲ ಸರ್ವಸ್ಥಳದಲ್ಲಿ ವ್ಯಾಪ್ತವಾಗಿಹ ನಿನ್ನ
ಲೋಲ ಮೂರುತಿಯ ನೆನೆವೆ ಫಾಲನಯನಾ
ಪಾಲಿಗೇ ಪಾಲನೆಂತೆಂದು ಕಾಲ ಮೀರದೆ
ಚಲಿಸದೆಲೆ ಬಾರೋ ಗರಳಧಾರಿ ೨

ಶ್ರೀಕೃಷ್ಣ ದಾಸನೆ ನಿನ್ನ ಇಷ್ಟನೆಂತೆಂದು
ಮನಮುಟ್ಟಿ ಭಜಿಸುವೆನೋ ಚಾರುದೇಷ್ಣೆಪಾಲಾ
ದಿಟ್ಟ ಗುರು ಕೃಷ್ಣವಂದಿತ **ತಂದೆ-**
**ವರದಗೋಪಾಲವಿಠ್ಠಲ** ಸಹಜ ಬಂದು ೩

– – –

# ಅನುಬಂಧಗಳು

## ಅನುಬಂಧ – ೧

## ಶ್ರೀ ವಾದಿರಾಜರ ಪ್ರಭಾವಲಯದ ಹಬ್ಬುಗೆ

### (ಉತ್ತರ ಭಾಗದ ಕರ್ನಾಟಕವನ್ನು ಅನುಲಕ್ಷಿಸಿ)

ಕೆಲವು ವರ್ಷಗಳ ಹಿಂದಿನ ಮಾತು. ಧಾರವಾಡದಲ್ಲಿಯ ನನ್ನೊಬ್ಬ ಮಿತ್ರ–ವಕೀಲರ ಮಗ ಬೆಂಗಳೂರಲ್ಲಿ ಅಕಸ್ಮಾತ್ ಸಂಧಿಸಿದ. ಅವನು ಮದ್ರಾಸದಲ್ಲಿದ್ದು ಸುಸ್ಥಿತಿಯಲ್ಲಿ ಇದ್ದಾನೆ.

"ಎಲ್ಲಿಗೆ ಹೊರಟೇದ್ದೀಯ? ಧಾರವಾಡಕ್ಕೇನು?" ಎಂದು ಕೇಳಿದೆ.

"ಇಲ್ಲ. ಸ್ವಾದಿಗೆ ಹೊರಟೇನಿ".

ನನಗೆ ಆಶ್ಚರ್ಯವಾಯಿತು. "ಈಗ ಯಾಕೊ? ಏನಾದರೂ ಧಾರ್ಮಿಕ ಕಾರ್ಯವೆ?" ಎಂದು ಕೇಳಿದೆ.

"ಏನಿಲ್ಲ, ನನಗೆ ಜೀವನದಲ್ಲಿ ಏನಾದರೂ ಒಳ್ಳೆಯದಾದರೆ, ಸ್ವಾದಿಯ ನೆನಪಾಗುತ್ತದೆ. ವಾದಿರಾಜ ಗುರುಗಳಿಗೆ ಥ್ಯಾಂಕ್ಸ್ ಹೇಳಲಿಕ್ಕೆ ಹೊರಟೇನಿ".

ಇನ್ನೊಂದು ಈಚಿನ ಪ್ರಸಂಗ; ನಾನು ಹುಬ್ಬಳ್ಳಿಯಿಂದ ಎಸ್.ಟಿ. ಬಸ್ಸಿನಲ್ಲಿ ಸೋದೆಗೆ ಹೊರಟಿದ್ದೆ. ಹುಲೇಕಲ್ ದಾಟಿದ ಮೇಲೆ ನಾವು ಮೂವರು ಮಾತ್ರ ಉಳಿದಿದ್ದೆವು. ಒಬ್ಬ ಹಳ್ಳಿಯವ. ಇನ್ನೊಬ್ಬ ಜೀನ್ಸ ಧರಿಸಿದ್ದ ೧೮–೨೦ ವರ್ಷದ ತರುಣ. ಸೋದೆಯಲ್ಲಿ ಬಸ್ಸಿನಿಂದ ಇಳಿದ ಮೇಲೆ, ನನ್ನನ್ನು ಇಂಗ್ಲಿಷ್‌ನಲ್ಲಿ ಕೇಳಿದ:

"ನೀವು ಮಠಕ್ಕೆ ಹೊರಟೀರೇನು? ನಾನು ಹೈದ್ರಾಬಾದಿನವ. ನನಗೆ ಇಲ್ಲಿ ಒಂದು ವಾರ ಇದ್ದು ಸೇವೆ ಮಾಡಬೇಕಂತೆ. ಅಮ್ಮ ಹೇಳಿ ಕಳಿಸಿದ್ದಾಳೆ. ಯಾರನ್ನು ಇಲ್ಲಿ ವಿಚಾರಿಸಬೇಕು? ಹಾಗೇ ನನಗೆ ಒಂದು ಜನಿವಾರವನ್ನು ಕೊಡಿಸುವಿರಾ?"

ಸೋದೆಗೆ ಹೋಗೋದು; ಗುರುಗಳ ಸೇವೆ ಮಾಡೋದು – ಈ ಪರಿಕ್ರಮ ದಿನದಿನಕ್ಕೆ ಹೆಚ್ಚಾಗುತ್ತ ಸಾಗಿದೆ. ಅದಕ್ಕೆ ಯಾವುದೊಂದು ಅಪತ್ತಿನ ಪರಿವಾರವೇ ಉದ್ದೇಶವಾಗಿರಬೇಕಿಲ್ಲ. ಮದುವೆ, ಮುಂಜಿವೆ, ಷಷ್ಟ್ಯಬ್ದಿ –

ಇಂಥ ಧರ್ಮಕಾರ್ಯಗಳನ್ನು ಸೋದೆಯಲ್ಲಿಯೇ ನಡೆಸಬೇಕೆಂದು ಇಟ್ಟುಕೊಂಡವರೂ ಅದೆಷ್ಟೋ ಜನ. ಇದಾವುದಿಲ್ಲದಿದ್ದರೂ ಒಮ್ಮೆ ಸೋದೆಗೆ ಹೋಗಿ ಬರಬೇಕು ಎಂದು ತಿಳಿಯುವವರಿಗೂ ಲೆಕ್ಕವಿಲ್ಲ. ನನಗೆ ವಿಶೇಷವಾಗಿ ಕಂಡದ್ದೆಂದರೆ ಇಂಥವರಲ್ಲಿ ಹೆಚ್ಚಿನವರು ಔತ್ತರೇಯ ಕರ್ನಾಟಕದವರು. ಅಲ್ಲದೆ ಅನ್ಯ ಮಠಗಳ ಅನುಯಾಯಿಗಳು.

ನಮ್ಮಲ್ಲಿ ಇರುವ ಕೆಲವೇ ವಾದಿರಾಜೀಯ ಮೃತ್ತಿಕಾ ವೃಂದಾವನಗಳಲ್ಲಿ ಹೆಚ್ಚಿನವು ಔತ್ತರೇಯ ಕರ್ನಾಟಕದಲ್ಲೇ ಇವೆ. ಶ್ರೀ ವಾದಿರಾಜರು ಆ ಪ್ರದೇಶಗಳಲ್ಲಿ ಹಲವು ಬಾರಿ ಸಂಚರಿಸಿದ್ದರಲ್ಲಿ ಸಂದೇಹವೇ ಇಲ್ಲ. 'ತೀರ್ಥಪ್ರಬಂಧ'ದಲ್ಲಿ ಅದಕ್ಕೆ ನಿದರ್ಶನಗಳು ಸಿಕ್ಕುತ್ತವೆ. ಸೋದೆಯ ಹತ್ತಿರದ ಯಾಣ, ಗೋಕರ್ಣ, ಮಂಜುಗಣಿಗಳಂತೂ ಸರಿಯೇ. ಧಾರವಾಡ ಜಿಲ್ಲೆಯ ಬಂಕಾಪುರ, ಬಿದರಹಳ್ಳಿ; ಬಳ್ಳಾರಿ ಜಿಲ್ಲೆಯ ಹಂಪಿ, ಆನೆಗೊಂದಿಗಳನ್ನೂ, ಅಲ್ಲಿಯ ದೇವತೆಗಳನ್ನೂ ಆ ಕಾವ್ಯದಲ್ಲಿ ರಸವತ್ತಾಗಿ ವರ್ಣಿಸಿದ್ದಾರೆ.

ಶ್ರೀ ವಾದಿರಾಜರ ಜೀವಿತ ಕಾಲದಲ್ಲಿಯೇ ಉತ್ತರ ಕರ್ನಾಟಕಸ್ಥರು ಕೆಲವರಾದರೂ ಅವರ ಶಿಷ್ಯತ್ವವನ್ನು ವಹಿಸಿದ್ದರು. ಕನಕದಾಸರು ಕಾಗಿನೆಲೆಯವರು. ಉಡುಪಿಗೆ ಹೋಗಿ ಶ್ರೀ ವಾದಿರಾಜರ ಕೃಪೆಯಿಂದ ಕೃಷ್ಣದರ್ಶನ ಪಡೆದದ್ದು ಸರಿಯೇ. ಆ ಮುಂದೆ ಅವರು ಸೋದೆಗೂ ಹೋಗಿ ಶ್ರೀ ವಾದಿರಾಜರನ್ನು ಕಂಡು ಬರುತ್ತಿದ್ದಿರಬೇಕು. ತಾನು 'ಸೋದೆಯ ಶ್ರೀ ತ್ರಿವಿಕ್ರಮದೇವರ ದಾಸರ ದಾಸ' ಎಂದು ಕರೆದುಕೊಂಡಿದ್ದಾರೆ.

ಓರ್ವ ಅದ್ವೈತ ಪಂಡಿತನೊಂದಿಗೆ ವಾದ ಹೂಡಲೆಂದು ಹೋಗಲು ಶ್ರೀ ವಾದಿರಾಜರಿಗೆ ಅನುಕೂಲವಾಗಿರಲಿಲ್ಲ; ತಮ್ಮ ಶಿಷ್ಯರೊಬ್ಬರನ್ನು ಕಳುಹಿಸಿದರು; ಅವರು ಆ ಪಂಡಿತನನ್ನು ಸೋಲಿಸಿ ಜಯಪತ್ರವನ್ನು ತಂದು ಶ್ರೀ ವಾದಿರಾಜರಿಗೆ ಅರ್ಪಿಸಿದರು ಎಂಬುದಾಗಿ ವಾದಿರಾಜರ ಚರಿತ್ರೆಯಲ್ಲಿ ಬರುತ್ತದೆ. ಈ ಯಶಸ್ವೀ ಕೆಲಸ ಮಾಡಿದವರು, ಧಾರವಾಡ ಕಡೆಯಲ್ಲಿ ಪ್ರಸಿದ್ಧವಾಗಿರುವ ಪಾಂಡುರಂಗಿ ಮನೆತನದ ಆನಂದಭಟ್ಟಾಚಾರ್ಯರು. (ಉತ್ತರಾದಿ ಮಠದ ಶ್ರೀ ವಿದ್ಯಾಧೀಶರು ಪೂರ್ವಾಶ್ರಮದಲ್ಲಿ ಇವರ ಮಗ). ಅವರಿಗೆ ಮಕ್ಕಳಿರಲಿಲ್ಲ. ಗುರುಗಳ ಅನುಗ್ರಹದಿಂದ ತಮ್ಮ ವಂಶ ಮುಂದುವರಿಯಿತೆಂದು ಹೇಳಿಕೊಂಡಿದ್ದಾರೆ.

ಶ್ರೀ ವಾದಿರಾಜರ ಸುದೀರ್ಘ ಜೀವಿತ ಕಾಲದಲ್ಲಿ ನಾಲ್ವರು ಯತಿಗಳು ಉತ್ತರಾದಿಮಠದ ಪೀಠವನ್ನು ಅಲಂಕರಿಸಿದ್ದರು. ಅವರಲ್ಲಿ ಶ್ರೀ

ವಿದ್ಯಾನಿಧಿತೀರ್ಥರು ಮತ್ತು ಶ್ರೀ ರಘೂತ್ತಮತೀರ್ಥರು ಹೆಚ್ಚು ಖ್ಯಾತಿವೆತ್ತವರು. ಅವರೊಡನ ಶ್ರೀ ವಾದಿರಾಜರ ಸಂಬಂಧ ಹೇಗಿದ್ದಿತೆಂಬುದು ಸ್ಪಷ್ಟವಾಗಿ ತಿಳಿಯದು. ಹಾರ್ದಿಕವಾಗಿಯೇ ಇದ್ದಿರಲು ಸಾಕು. ಅದೇ ಶ್ರೀ ವಿಜಯೀಂದ್ರ-ತೀರ್ಥರೊಡನೆ ಅದರಂತೆ ಪರ್ತಗಾಳಿಮಠದ ಜೀವೋತ್ತಮತೀರ್ಥರೊಡನೆ ವಿಶೇಷ ಸಂಪರ್ಕವಿದ್ದ ಬಗ್ಗೆ ಪುರಾವೆಗಳಿವೆ. ಕುಮಠೆ ಹಾಗೂ ಗೋಕರ್ಣದಲ್ಲಿ ಈಗಲೂ ವಾದಿರಾಜೀಯ ಮಠಗಳಿವೆ.

ಶ್ರೀ ವಾದಿರಾಜರು ವೃಂದಾವನಸ್ಥರಾದ ೬೦–೭೦ ವರ್ಷಗಳಲ್ಲಿಯೇ ಅವರ ಖ್ಯಾತಿ ಔತ್ತರೇಯ ಕರ್ನಾಟಕದಲ್ಲಿ ಹಬ್ಬಿದ್ದಿತು. ನಮಗೆ ದೊರೆತ ವಾದಿರಾಜ ಸ್ತುತಿಪರ ಹಾಡುಗಳಲ್ಲಿ ಮೊದಲಿನದು ಪ್ರಸನ್ನವೆಂಕಟದಾಸರದ್ದು. ಅವರು ಬಾಗಲಕೋಟೆ ಕಾಖಂಡಕಿಯವರು. ಅದಕ್ಕೂ ಉತ್ತರದಲ್ಲಿದ್ದ ವಿಜಯದಾಸರು ಇವರ ಸಮಕಾಲೀನರೇ. ಶ್ರೀ ವಾದಿರಾಜರನ್ನು ಮನದಣಿಯೆ ಸ್ತುತಿಸಿದ್ದಾರೆ ಮಾತ್ರವಲ್ಲ, ಶ್ರೀ ವಾದಿರಾಜರ ಋಜುತ್ವ ಹಾಗೂ ಭಾವೀಸಮೀರತ್ವವು ಕೂಡ ಅವರ ಕಾಲಕ್ಕೆ ನೆಲೆಗೊಂಡಿರಬೇಕು. ಎಂತಲೇ ಅವರು ತಮ್ಮ ಹಾಡುಗಳಲ್ಲಿ ಈ ಅಂಶಗಳನ್ನು ತಂದಿದ್ದಾರೆ. ಈಗ ಋಜುತ್ವ ವಿಚಾರವನ್ನು ಪ್ರತಿಪಾದಿಸುವವರು ಅಪರೋಕ್ಷ ಜ್ಞಾನಿಗಳಾದ ವಿಜಯದಾಸರನ್ನು ಅವಶ್ಯವಾಗಿ ಉಲ್ಲೇಖಿಸುತ್ತಾರೆ. ವಿಜಯದಾಸರಂತಹ ಮಹಾಮಹಿಮ ಗುರುಗಳು ಹೇಳಿದ ಮೇಲೆ ಇನ್ನೇನು – ಎಂದು, ಅವರ ಶಿಷ್ಯ ಪ್ರಶಿಷ್ಯರೂ ಆ ಮಾತನ್ನು ಒಪ್ಪಿಕೊಂಡೇ ಮುಂದೆ ಸಾಗಿದ್ದಾರೆ. ತಂತಮ್ಮ ಕೀರ್ತನೆಗಳಲ್ಲಿ ಅದನ್ನು ತಂದಿದ್ದಾರೆ.

ಹತ್ತೊಂಬತ್ತನೆಯ ಶತಮಾನದಷ್ಟೊತ್ತಿಗೆ ಧಾರವಾಡ ಜಿಲ್ಲೆಯ ಹಲವಾರು ಉತ್ತರಾದಿಮಠೀಯರಲ್ಲಿ ವಾದಿರಾಜ ನಿಷ್ಠೆ ಆಳವಾಗಿ ಬೇರೂರಿತ್ತು. ಮಾದರಿಗೆಂದು ಸರಪಳಿ ಮನೆತನವನ್ನು ಹೆಸರಿಸುವೆ. ಆ ಮನೆತನದ ಹಿರಿಯ ತಲೆಮಾರಿನ ಗೋಪಾಲಕೃಷ್ಣಾಚಾರ್ಯರು ೧೯ನೇ ಶತಮಾನದ ಆರಂಭಕಾಲದವರು. ಸೋದೆಗೆ ಮೇಲಿಂದ ಮೇಲೆ ಹೋಗುತ್ತಿದ್ದರಲ್ಲದೇ ತರುಣ ವಯದ ಅಲ್ಲಿಯ ವಿಶ್ವಪ್ರಿಯತೀರ್ಥರಿಗೆ ವೇದಾಂತ ಬೋಧನೆ ಮಾಡುತ್ತಿದ್ದರು, ಎಲ್ಲಿ? ಸ್ವತಃ ವಾದಿರಾಜ ವೃಂದಾವನದ ಸಮಕ್ಷಮದಲ್ಲಿ. ಯಾವುದೊಂದು ಪ್ರಮೇಯವನ್ನು ವಿವರಿಸುವಲ್ಲಿ ತಡವರಿಸಿದರೆ ಆಚಾರ್ಯರು ಮನದಲ್ಲಿ ಶ್ರೀ ವಾದಿರಾಜರನ್ನು ನೆನೆಯುತ್ತಿದ್ದರಂತೆ; ಅರ್ಥ ಸ್ಫುರಿಸುತ್ತಿತ್ತಂತೆ!

## ಜಂಬುಖಂಡಿ ವಾದಿರಾಚಾರ್ಯರು

ಉತ್ತರ ಭಾಗದ ಕರ್ನಾಟಕದಲ್ಲಿ (ಬಳ್ಳಾರಿಯೂ ಸೇರಿದಂತೆ) ಶ್ರೀ ವಾದಿರಾಜರ ಪ್ರಭಾವಲಯವನ್ನು ವಿಸ್ತರಿಸಿದವರಲ್ಲಿ ಜಂಬುಖಂಡಿ ವಾದಿರಾಜಾಚಾರ್ಯರ ಪಾತ್ರ ಹಿರಿದಾದದ್ದು (೧೯ನೆಯ ಶತಮಾನದ ಉತ್ತರಾರ್ಧ). ಅವರು ಮೂಲತಃ ಹಾನಗಲ್ಲಿನವರು. ತಂದೆತಾಯಿಗಳು ಹಾನಗಲ್ಲಿಗೆ ಸಮೀಪವೇ ಇರುವ ಸೋದೆಗೆ ಹೋಗಿ ಶ್ರೀ ಗುರುಗಳ ಸೇವೆ ಮಾಡಿದ್ದರಿಂದ ಮಗ ಹುಟ್ಟಿದನೆಂದು ವಾದಿರಾಜ ಎಂದೇ ನಾಮಕರಣ ಮಾಡಿದರು. ಆಗ ಸೋದೆಯ ಮಠದಲ್ಲಿ ಮೇಲೆ ಹೇಳಿದ ವಿಶ್ವಪ್ರಿಯತೀರ್ಥರು (೧೭೮೬-೧೮೬೫) ಎಂದರೆ ವೃಂದಾವನಾಚಾರ್ಯರು, ಪೀಠಾಧಿಪತಿಗಳಾಗಿ ಇದ್ದರು. ಈ ವಾದಿರಾಜನ ಬಾಲ್ಯದ ವಿದ್ಯಾಭ್ಯಾಸವು ಅವರ ಕಣ್ಣರಿಕೆಯಲ್ಲೇ ಆಯಿತು. ವಾದಿರಾಜ ಯತಿಗಳ ಮೇಲಿನ ಭಕ್ತಿಯು ಅವರಲ್ಲಿ ಕ್ರಮೇಣ ನೂರ್ಮಡಿಸಿತು. ಆಚಾರ್ಯರ ಜೀವಿತದ ಕಾಲದಲ್ಲಿ ಶ್ರೀ ಸತ್ಯಧರ್ಮರು, ಶ್ರೀ ಸತ್ಯಪರಾಕ್ರಮರು, ಶ್ರೀ ಸತ್ಯವೀರರು – ಈ ಮೂವರು ಪೀಠಾಧಿಪತಿಗಳಾಗಿ ಉತ್ತರಾದಿಮಠದ ಸಂಸ್ಥಾನವನ್ನು ಆಳಿದ್ದರು. ಮೂಲ ನವರತ್ನ ಮನೆತನದ ಶ್ರೀ ಸತ್ಯಧರ್ಮರಂತೂ 'ಸತ್ಯಧರ್ಮ ಇತಿ ಖ್ಯಾತೋ ವಾದಿರಾಟ್ ಭಕ್ತಿಪೂರಿತಃ' ಎಂದೇ ಪ್ರಸಿದ್ಧರಾದವರು. ಅವರ ವೃಂದಾವನದಲ್ಲಿ ಈಗೂ ಶ್ರೀ ವಾದಿರಾಜರಿಗೆ ಹಸ್ತೋದಕ ನೀಡಲಾಗುತ್ತಿದೆ ಎಂದು ಕೇಳಿದ್ದೇನೆ. ಈಗಣ ವಾಯಿ ಮನೆತನದ ಸತ್ಯಪರಾಕ್ರಮರೂ ವಾದಿರಾಜರ ಭಕ್ತರೆಂದೇ ಪ್ರತೀತಿ ಇದೆ. ಜಂಬುಖಂಡಿ ಆಚಾರ್ಯರು ಇವರಲ್ಲಿಯೇ ಹೆಚ್ಚಿನ ವಿದ್ಯಾಭ್ಯಾಸವನ್ನು ಮಾಡಿದ್ದರು. ಆಗೆಲ್ಲ ಅವರು ವಾದಿರಾಜೀಯ ಸಂಪ್ರದಾಯದ ಪ್ರಕಾರ ಮೃತ್ತಿಕೆ ಹಚ್ಚಿಕೊಂಡೇ ಸುಳಿದಾಡುತ್ತಿದ್ದಾಗ, ಮಠದಲ್ಲಿದ್ದ ವೈದಿಕರು ಆಕ್ಷೇಪಿಸಿದರು. ಅದರಿಂದ ಆಚಾರ್ಯರು ಕೆಲಕಾಲ ಹೊರಗುಳಿಯ ಬೇಕಾಯಿತಂತೆ. ಕೊನೆಯಲ್ಲಿ ಶ್ರೀಗಳವರೇ "ದ್ವಾದಶ ನಾಮಗಳಿಗೆ ಮೃತ್ತಿಕಾ ಪ್ರತಿನಾಮ ಲೇಪಿಸಿದವರ ವಿಷಯ ಯಾರೂ ಆಕ್ಷೇಪಿಸಬೇಕಾದ ಕಾರಣವಿಲ್ಲ" ಎಂಬ ರಾಯಸವನ್ನು ಹೊರಡಿಸಬೇಕಾಗಿ ಬಂದಿತು.

ಅನಂತರ ಬಂದ ಕೊರ್ಲಹಳ್ಳಿ ಮನೆತನದ ಶ್ರೀ ಸತ್ಯವೀರರು ಜಂಬುಖಂಡಿ ಆಚಾರ್ಯರ ಸಹಪಾಠಿಗಳೇ. ಸುರುವಿಗೆ ಶ್ರೀ ವಾದಿರಾಜರ ಋಜುತ್ವವನ್ನು ಒಪ್ಪಿಕೊಂಡವರೇ ಆಗಿದ್ದರಂತೆ. ಆದರೆ ಮುಂದೆ ಇಬ್ಬರಲ್ಲಿ ವಿರಸ ಉಂಟಾಯಿತು. ವಿಕೋಪಕ್ಕೆ ಹೋಯಿತು. ವಾದಿರಾಜಾಚಾರ್ಯರಿಗೆ ಬಹಿಷ್ಕಾರ ಹಾಕಲಾಯಿತು. ಅದರಿಂದ ಆಚಾರ್ಯರು ಪಟ್ಟ ಕಷ್ಟ ಅಷ್ಟಿಷ್ಟಲ್ಲ.

ಆದಾಗ್ಯೂ ಪುಟಕ್ಕಿಟ್ಟ ಬಂಗಾರದಂತೆ ಅವರಲ್ಲಿ ವಾದಿರಾಜ ಭಕ್ತಿ ಇನ್ನಷ್ಟು ಬೆಳಗಿತು. ತಮ್ಮ ಸಂಚಾರ ಕಾರ್ಯದಲ್ಲಿ ಋಜುತ್ವವನ್ನು ಘಂಟಾಘೋಷವಾಗಿ ಸಾರಿದುದಲ್ಲದೆ, ಬಳ್ಳಾರಿ ಜಿಲ್ಲೆಯ ಶಿರಗುಪ್ಪ ಮತ್ತು ಬೆಳಗಾವಿ ಜಿಲ್ಲೆಯ ಶಹಾಪುರ – ಈ ಊರುಗಳಲ್ಲಿ ಪಂಚ ವೃಂದಾವನ ಸಹಿತವಾದ ಮೃತ್ತಿಕಾ ವೃಂದಾವನಗಳನ್ನು ಸ್ಥಾಪಿಸಿದರು.

ಮುಂದೆ ಬಳ್ಳಾರಿ, ಬೆಳಗಾವಿ ನಗರಗಳಲ್ಲಿ ವಾದಿರಾಜೀಯ ಮೃತ್ತಿಕಾ ವೃಂದಾವನಗಳು ನೆಲಗೊಂಡವು. ಈ ಪ್ರಾಶಸ್ತ್ಯವನ್ನು ಮನಗಂಡ ಧಾರವಾಡ ಜಿಲ್ಲೆಯವರೊಬ್ಬರು ಇದೇ ಸುಮಾರಿಗೆ ಹಾವನೂರ ಮತ್ತು ಸವಣೂರುಗಳಲ್ಲಿ ಮೃತ್ತಿಕಾ ವೃಂದಾವನಗಳನ್ನು ಸ್ಥಾಪಿಸಿದರು. ಏನಿದ್ದರೂ ಇವು ಐದಾರು ಮಠಗಳು ೧೯ನೆಯ ಶತಮಾನದ ಕೊನೆ-ಕೊನೆಯಲ್ಲಿ ಸ್ಥಾಪಿತವಾದವೆಂಬುದು ನಿಜ. ಸವಣೂರಲ್ಲಿಯ ವೃಂದಾವನವನ್ನು ಶ್ರೀ ಸತ್ಯಬೋಧಸ್ವಾಮಿಗಳ ಸೇವೆಯಲ್ಲಿರುವವರೇ ನೋಡಿಕೊಳ್ಳುತ್ತಿದ್ದಾರೆ. ಹಾವನೂರಲ್ಲಿ ಇರುವುದನ್ನು ಸ್ಥಳೀಯ ಗಲಗಲಿ ಮನೆತನದವರು ನೋಡಿಕೊಳ್ಳುತ್ತಿದ್ದಾರೆ. ಅವರು ಮಠದ ಜೀರ್ಣೋದ್ಧಾರವನ್ನು ಮಾಡಿಸಿರುವುದರಿಂದ ಮಠವು ಸುಸ್ಥಿತಿಯಲ್ಲಿದೆ. ಬದಿಯಲ್ಲೇ ತುಂಗಭದ್ರೆ ಹರಿಯುತ್ತಿದ್ದು ಸ್ಥಳವು ಪ್ರಶಸ್ತವಾಗಿದೆ. ಹರಿಹರದಿಂದ ಧಾರವಾಡದವರೆಗಿನ ಪ್ರದೇಶದ ಜನ ಆ ಮಠಕ್ಕೆ ನಡೆದುಕೊಳ್ಳುತ್ತಿದ್ದಾರೆ.

**ಕಳಸ ಗ್ರಾಮದಲ್ಲಿ**

ಎರಡು ವರ್ಷಗಳ ಹಿಂದೆ ಶ್ರೀ ಅನಂತ ತಡಸ ಎಂಬ ಮಿತ್ರರ ಸೂಚನೆಯ ಮೇರೆಗೆ ಕಳಸ (ಧಾರವಾಡ ಜಿಲ್ಲೆ) ಎಂಬ ಗ್ರಾಮಕ್ಕೆ ದಾಸರ ಹಾಡುಗಳ ಹಸ್ತಪ್ರತಿ ಸಂಗ್ರಹಕ್ಕೆಂದು ಹೋಗಿದ್ದೆ. ಅದೊಂದು ಹಳ್ಳಿ. ನಾನು ಹುಡುಕಿಕೊಂಡು ಹೋದದ್ದು ಗೌಡ/ಪಾಟೀಲರ ಮನೆತನ. ಅವರ ಮನೆಯಲ್ಲಿ ಒಬ್ಬರದಲ್ಲ ಮೂವರು ದಾಸರ ಹಾಡುಗಳ ಹಸ್ತಪ್ರತಿ ದೊರೆತುವು. ಅವುಗಳಿಂದ ಇದುವರೆಗೆ ಪ್ರಕಟವಾಗಿರುವ ವಾದಿರಾಜ ಸ್ತುತಿಪರವಾದ ೨೫-೩೦ ಹಾಡುಗಳು ದೊರೆತವು. ಎತ್ತಿ ಹೇಳಬೇಕಾದ ಮಾತೆಂದರೆ, ಅಲ್ಲಿ ಬರೆಯಲಾಗಿದ್ದ ಇತರ ದಾಸರುಗಳ ಹಾಡುಗಳ ಪ್ರತಿಯೊಂದರ ಮೇಲೂ 'ಶ್ರೀ ಮದ್ಭಾವಿಸಮೀರ ವಾದಿರಾಜ ಗುರುಭ್ಯೋನ್ನಮಃ' ಎಂಬ ಒಕ್ಕಣಿಕೆ ಇದ್ದದ್ದು.

ಕಳಸದ ಆ ಮೂವರು ಹರಿದಾಸರಲ್ಲಿ ಮುಖ್ಯರೆಂದರೆ; ೧೯೦೦ರಲ್ಲಿ ಜನಿಸಿದ ಪ್ರಹ್ಲಾದಗೌಡರು. 'ತಂದೆವರದಗೋಪಾಲವಿಠ್ಠಲ' ಎಂಬ ಮುದ್ರಿಕೆಯಿಂದ ನೂರಕ್ಕೆ ಮಿಕ್ಕಿದ ಹಾಡುಗಳನ್ನು ರಚಿಸಿದ್ದಾರೆ. ಅವರ

ತಂಗಿ ಕಳಸದ ಸುಂದರಮ್ಮ ದಾಸದೀಕ್ಷೆ ವಹಿಸಿದ್ದರು. ಅವಳ ಅಂಕಿತ 'ಕಾಳಿಮರ್ದನಕೃಷ್ಣ'. ಈ ಪ್ರಹ್ಲಾದಗೌಡರ ಕಿರಿಯ ಒಡನಾಟದ ನರಸಿಂಗರಾಯರೂ ದಾಸದೀಕ್ಷೆಯನ್ನು ವಹಿಸಿ 'ಗುರು-ತಂದೆ-ವರದ-ಗೋಪಾಲ-ವಿಠಲಾಂಕಿತ'ರಾಗಿ ಕೆಲವು ಹಾಡುಗಳನ್ನು ರಚಿಸಿದ್ದಾರೆ. (ವಾದಿರಾಜರನ್ನು ಕುರಿತ ಈ ಮೂವರ ಹಾಡುಗಳು ಪ್ರಸ್ತುತ ಸಂಕಲನದಲ್ಲಿವೆ).

ಪ್ರಹ್ಲಾದಗೌಡರ ವಾದಿರಾಜ ಭಕ್ತಿಯ ಆಳ ಎಷ್ಟು ಎನ್ನುವುದಕ್ಕೆ ಒಂದು ಉದಾಹರಣೆ ಕೊಡಬೇಕೆನಿಸುವುದು. ಸೋದೆಯಲ್ಲಿರುವ ಧವಲಗಂಗಾದಲ್ಲಿ ಆಗ್ನೇಯ ದಿಕ್ಕಿಗೆ ಯಾರೂ ಸ್ನಾನಕ್ಕೆಂದು ಹೋಗುವುದಿಲ್ಲ. ಅದು ಭೂತರಾಜರ ನೆಲೆಯಂತೆ. ಆದರೆ ಪ್ರಹ್ಲಾದಗೌಡರು ಅಲ್ಲಿಯೇ ಸ್ನಾನ ಮಾಡುತ್ತಿದ್ದಾಗ ಕಿರಿಯ ಮಿತ್ರ ನರಸಿಂಗರಾಯರು ಸೌಮ್ಯವಾಗಿ ಆಕ್ಷೇಪಿಸಿದರು. ಅದಕ್ಕೆ ಅವರು ನಸು ನಕ್ಕು ಸ್ನಾನವನ್ನು ಮುಂದುವರಿಸಿದರಂತೆ. ಇದರರ್ಥ, ಅವರು ಭೂತರಾಜರ ವಿಶೇಷ ಕೃಪೆಗೆ ಪಾತ್ರರಾಗಿದ್ದರೆಂದು ಹೇಳಬಹುದು.

ವಾದಿರಾಜಾಚಾರ್ಯರು ತೀರಿಹೋದ ಮೇಲೆ ಅವರ ಮಗ ಬೆಳಗಾಂವಿಯಲ್ಲಿ ವಾದಿರಾಜ ಸೇವಾ ಪರಂಪರೆಯನ್ನು ಮುಂದುವರಿಸಿದರು. 'ಸ್ವಪ್ನವೃಂದಾವನಾಖ್ಯಾನ'ವನ್ನು ಮೊದಲಿಗೆ ಪ್ರಕಟಿಸಿದ್ದುದು (೧೯೨೯) ಅವರೇ. ಅವರ ನಿಕಟವರ್ತಿಗಳೆಂದರೆ ಶಿಷ್ಯ ವಾಳವೇಕರ ವೆಂಕಣ್ಣಾಚಾರ್ಯರು; ಈ ಆಚಾರ್ಯರ ಶಿಷ್ಯ ಶ್ರೀ ಜಿ.ಜಿ. ಪುರಾಣಿಕರು; ಹೀಗೆ ವಾದಿರಾಜನಿಷ್ಠೆ ಬೆಳೆಯುತ್ತ ಸಾಗಿದೆ. ವೆಂಕಣ್ಣಾಚಾರ್ಯರು ಬೆಳಗಾಂವಿಯಲ್ಲಿ 'ವೀಣಾಪಾಣಿ ಪ್ರಾಣದೇವರ' ಪ್ರತಿಷ್ಠಾಪನೆ ಮಾಡಿದ್ದಾರೆ. (೧೯೩೨). ಸೋದೆಯಲ್ಲಿ ಶ್ರೀ ವಾದಿರಾಜರು ಪ್ರತಿಷ್ಠಾಪಿಸಿದ್ದ ಇಂಥದೇ ಮೂರ್ತಿಯಿಂದ ಅವರಿಗೆ ಪ್ರಚೋದನೆ ದೊರೆತಿರಬೇಕಲ್ಲವೆ.

**ಕೆಲವು ಕುರುಹುಗಳು**

ದೇವರಮೂರ್ತಿಯ ಪ್ರಸಕ್ತಿ ಬಂತೆಂದು ಇದೊಂದು ಸಂದರ್ಭವನ್ನು ಹೇಳಬೇಕು. ಹಿಂದೊಮ್ಮೆ ರಾಯಚೂರು ಜಿಲ್ಲೆಯ ಲಿಂಗಸುಗೂರಿಗೆ ಹೋಗಿದ್ದೆ. ದಾಸ ಸಾಹಿತ್ಯದ ಆದಿಮ ಪರಿಶೋಧಕರಲ್ಲೊಬ್ಬರಾದ ಗೊರಾಬಾಳು ಹನುಮಂತರಾಯರ ಮನೆ ಅಲ್ಲಿದೆ. ನಾನು ಆ ಮನೆಗೆ ಹೋದಾಗ ಅವರ ಮೊಮ್ಮಗ ಪೂಜೆ ಮಾಡುತ್ತಿದ್ದುದನ್ನು ನೋಡುತ್ತ ನಿಂತಿದ್ದೆ. ದೊಡ್ಡ ತಾಬಾಣದ ತುಂಬ ಸಾಲಿಗ್ರಾಮಗಳಿಗೆ ಹಾಗೂ ದೇವತಾಮೂರ್ತಿಗಳಿಗೆ ಅಭಿಷೇಕ ನಡೆದಿತ್ತು. ಅವುಗಳಲ್ಲಿ ಒಂದು ಸಾಲಿಗ್ರಾಮವನ್ನು ಎತ್ತಿ ಹಿಡಿದು ಆತ:

"ಇದನ್ನು ಏಳು ತಲೆಮಾರುಗಳ ಹಿಂದೆ ಶ್ರೀ ವಾದಿರಾಜ ಗುರುಗಳು ಕುಪ್ಪಣ್ಣ ಎಂಬ ನಮ್ಮ ಹಿರಿಯರಿಗೆ ಕೊಟ್ಟಿದ್ದರಂತೆ" ಎಂದು ವಿವರಿಸಿದರು. ಶ್ರೀ ವಾದಿರಾಜರು ತಮ್ಮ ಸಂಚಾರದಲ್ಲಿ ಲಿಂಗಸುಗೂರಿನ ತನಕ ಬಂದಿದ್ದಾಗ, ಅವರು ಸತ್ಕಾರ ಮಾಡಿದ್ದರು. ಅದರಿಂದ ಪ್ರೀತರಾದ ಶ್ರೀ ವಾದಿರಾಜರು ಆ ಸಾಲಿಗ್ರಾಮವನ್ನು ಅನುಗ್ರಹಿಸಿದ್ದರಂತೆ. ಹೇಗೂ ಸರಿಯೇ; ನಮ್ಮ ಗುರುಗಳ ಪ್ರಭಾವದ ವಿಸ್ತರಣೆಯ ನಿದರ್ಶನವೆಂದೇ ಇದನ್ನು ಬಗೆಯಬೇಕು.

ಇಂಥ ಕುರುಹುಗಳು ಬೇರೆ ಕಡೆಗೂ ಲಭ್ಯವಿವೆ. ಮೈಸೂರಿನ ಜಯನಗರ ಬಡಾವಣೆಯಲ್ಲಿರುವ ಶ್ರೀ ಗುರುರಾಜರಾವ್ ಎಂಬವರಲ್ಲಿ, ಶ್ರೀ ವಾದಿರಾಜರು ಸ್ವತಃ ಉಪಯೋಗಿಸುತ್ತಿದ್ದ ಪಾದುಕೆಗಳಿರುವುದಾಗಿಯೂ, ಅವನ್ನು ಭಕ್ತಿಭಾವದಿಂದ ಪೂಜಿಸುವುದಾಗಿಯೂ ತಿಳಿದು ಬಂತು. ಕೊಚ್ಚಿ ಮಹಾರಾಜರು ಶ್ರೀ ವಾದಿರಾಜರಿಗೆ ಅರ್ಪಿಸಿದ್ದ ಚಿನ್ನದ ಪಂಚವೃಂದಾವನವು ಉದ್ಯಾವರದಲ್ಲಿ ಒಂದೆಡೆ ನೋಡಲು ಸಿಗುತ್ತದಂತೆ. ಅದರಂತೆ ನಾರಳಮಠದಲ್ಲಿ ಭೂತರಾಜರಿಗೆ ಸಂಬಂಧಿಸಿದ ಕುರುಹುಗಳೂ ಇವೆಯೆಂದು ಕೇಳಿದ್ದೇನೆ. ಇವೆಲ್ಲ ಬಾಹ್ಯ ಸ್ಥಳಗಳ ಕುರುಹುಗಳು. ಶ್ರೀ ವಾದಿರಾಜರ ಪ್ರಭಾವದ ಹಬ್ಬುಗೆಗೆ ನಿದರ್ಶನಗಳೆಂಬ ಕಾರಣದಿಂದ ಗಣನೀಯವಾಗಿವೆ.

ಇದೇ ಶತಮಾನದ ಪೂರ್ವಾರ್ಧದಲ್ಲಿ ಶ್ರೀ ವಾದಿರಾಜ ಮಹೋನ್ನತಿಯ ದ್ಯೋತಕವೆಂದು ಎರಡು ಸಂದರ್ಭಗಳನ್ನು ಪ್ರಾಸಂಗಿಕವೆಂದು ಹೇಳಬಹುದು. ಒಂದು, ಉತ್ತರಾದಿಮಠದ ಮೂಲರಾಮದೇವರ ಪೂಜೆ ಮುಗಿದು ಭುಜಂಗಿಸುವಾಗ, ಶ್ರೀ ವಾದಿರಾಜ ಕೃತ ದಶಾವತಾರ ಸ್ತೋತ್ರವನ್ನು ತಪ್ಪದೇ ಹೇಳುತ್ತಾರೆ. ನನಗೆ ಗೊತ್ತಿದ್ದ ಮಟ್ಟಿಗೆ ಶ್ರೀ ಸತ್ಯಧ್ಯಾನರ ಕಾಲದಿಂದ ನಡೆದುಕೊಂಡು ಬಂದ ಕ್ರಮವಿದು. ಈಚೆಗೆ ವೃಂದಾವನಸ್ಥರಾದ ಶ್ರೀ ಸತ್ಯಪ್ರಮೋದತೀರ್ಥರು ಸೋದೆಯಲ್ಲಿಯೇ ಒಮ್ಮೆ ಚಾತುರ್ಮಾಸಕ್ಕೆ ಕುಳಿತು ಶ್ರೀ ವಾದಿರಾಜರ ವೃಂದಾವನದ ಸಮ್ಮುಖದಲ್ಲಿ ಅವರ ಸುಪ್ರಸಿದ್ಧ 'ಯಕ್ತಿಮಲ್ಲಿಕಾ ಗ್ರಂಥ'ಕ್ಕೆ ವಿವೃತಿಯನ್ನು ಬರೆದದ್ದು ತಿಳಿದ ವಿಷಯವೇ ಆಗಿದೆ.

**ಅಕಡೆಮಿಕ್ ಕ್ಷೇತ್ರಗಳಲ್ಲಿ**

ಈಚೆಗೆ ಅಕಡೆಮಿಕ್ ಎಂದರೆ ವಿಶ್ವವಿದ್ಯಾಲಯಗಳ ಮಟ್ಟದಲ್ಲಿ ಶ್ರೀ ವಾದಿರಾಜರ ಕೃತಿಗಳನ್ನು ಕುರಿತು ಆಳವಾಗಿ ಅಭ್ಯಾಸ ಮಾಡಿದವರು ಅಲ್ಲಲ್ಲಿ ಕಂಡುಬರುತ್ತಾರೆ. ಕರ್ನಾಟಕ ವಿಶ್ವವಿದ್ಯಾಲಯದ ನಿವೃತ್ತ ಪ್ರೊಫೆಸರ್ ಡಿ.ಎನ್. ಶಾನಭಾಗರು ಒಬ್ಬ 'ಅಥಾರಿಟಿ' ಎನಿಸುವಷ್ಟು ಆಳವಾಗಿ

ವಾದಿರಾಜರ ಗ್ರಂಥಗಳನ್ನು ವ್ಯಾಸಂಗ ಮಾಡಿದವರು. ಅವರ ಮಾರ್ಗದರ್ಶನದಲ್ಲಿ ಧಾರವಾಡದ ಡಾ॥ ತಡಕೋಡ ಎನ್ನುವವರು "ರುಕ್ಮಿಣೀಶ ವಿಜಯ"ದ ಮೇಲೆ ಪಿ.ಎಚ್.ಡಿ ಪ್ರಬಂಧವನ್ನು ಸಾದರಪಡಿಸಿದರು. ಡಾ॥ ಎಚ್.ಜಿ. ಲೋಕೂರರಂತೂ ಶ್ರೀ ವಾದಿರಾಜರ ಸಮಗ್ರ ಅಧ್ಯಯನ ಮಾಡಿ ಡಾಕ್ಟರೇಟ್ ಪಡೆದವರು.

ವಿದೇಶಗಳಲ್ಲಿಯೂ ಶ್ರೀ ವಾದಿರಾಜರ ಪ್ರಭಾವ ಹಬ್ಬಿದ್ದುದು ಹೆಮ್ಮೆಯ ಮಾತಾಗಿದೆ. ಕಳೆದ ಶತಮಾನದ ಕಾಲದಿಂದ ಇಂಗ್ಲೆಂಡ್, ಜರ್ಮನಿ, ಫ್ರಾನ್ಸ್ ಮತ್ತು ಅಮೆರಿಕೆಗಳಲ್ಲಿ ಸಂಸ್ಕೃತ ಕೃತಿಗಳ ವ್ಯಾಸಂಗಕ್ಕೆ ಮನ್ನಣೆ ದೊರೆಯಿತಷ್ಟೆ. ಅಲ್ಲಿ ಶ್ರೀ ವಾದಿರಾಜರ ಕೃತಿಗಳನ್ನು ಅಭ್ಯಾಸ ಮಾಡಿದವರಿದ್ದಾರೆ. ಲೇಖನಗಳನ್ನೂ ಬರೆದಿರಲು ಸಾಕು. ಒಂದನ್ನು ಮಾತ್ರ ಕಾಣಿಸುವೆ. ಬೆಟ್ಟಿ ಸ್ಟ್ಯಾಫರ್ಡ್ ಎನ್ನುವ ಮಹಿಳೆ ಶ್ರೀ ವಾದಿರಾಜರ 'ನ್ಯಾಯ ರತ್ನಾವಳಿ'ಯನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿ ಪ್ರಬಂಧ ಬರೆದಿದ್ದಾಳೆ. ಅದು ಮೂಲದಲ್ಲಿ ಅದ್ವೈತ ತತ್ತ್ವಗಳನ್ನು ಖಂಡಿಸುವ ಕೃತಿ.

ಅಬ್ದುಸ್ ಸಲಾಮ್ ಎನ್ನುವ ಓರ್ವ ವಿಜ್ಞಾನಿಗೆ ನೋಬಲ್ ಬಹುಮಾನ ಸಂದಿತ್ತಷ್ಟೆ. ಅವರು ಪಾಕಿಸ್ತಾನದವರು. ೧೯೭೦ಳರಲ್ಲಿ ಎಂದು ಕಾಣುತ್ತದೆ, ಮುಂಬಯಿಯ ಟಿ.ಐ.ಎಫ್.ಆರ್. ಎಂಬ ವಿಜ್ಞಾನ ಸಂಸ್ಥೆಯಲ್ಲಿ ಭಾಷಣ ಮಾಡುವಾಗ ತಾವು ಶ್ರೀ ವಾದಿರಾಜರ ಕೆಲವು ಕೃತಿಗಳನ್ನೂ ಅಭ್ಯಾಸ ಮಾಡಿದ್ದಾಗಿಯೂ, ವಿಶೇಷತಃ ತಮಗೆ ರುಕ್ಮಿಣೀಶ ವಿಜಯವೂ, ಬ್ರಹ್ಮಸೂತ್ರದ ಮೇಲಿನ ಶ್ರೀ ಮಧ್ವಾಚಾರ್ಯರ ಭಾಷ್ಯಕ್ಕೆ ಶ್ರೀ ವಾದಿರಾಜರು ಬರೆದ ಟಿಪ್ಪಣಿಯೂ ಮೆಚ್ಚಿಕೆಯಾಯಿತೆಂಬ ಮಾತನ್ನು ಹೇಳಿದರಂತೆ. (ಆ ದಿನ ಅದನ್ನು ಕೇಳಿಸಿಕೊಂಡವರು ಮಿತ್ರರಾದ ಶ್ರೀ ಬಿ.ಟಿ. ಆಚಾರ್ಯರು) ಅಬ್ದುಸ್ ಸಲಾಮ್ ಮುಸ್ಲಿಮರು; ಮೇಲಾಗಿ ಅವರ ವಿಷಯ, ವಿಜ್ಞಾನ! ಅವರು ಸಂಸ್ಕೃತದಲ್ಲಿ ಆಸಕ್ತಿ ತಳೆದದ್ದರಲ್ಲಿಯಾದರೂ ಅಸಂಭವನೀಯತೆ ಇಲ್ಲ. ಆದರೆ ಶ್ರೀ ವಾದಿರಾಜರ ಕೃತಿಗಳಲ್ಲಿ ಒಲವನ್ನು ತೋರಿದುದು ಆಶ್ಚರ್ಯಕರವೇ ಸೈ.

ಫೆಬ್ರವರಿ, ೧೯೯೮ — *ಶ್ರೀನಿವಾಸ ಹಾವನೂರ*

## ಅನುಬಂಧ – ೨

## ಶ್ರೀ ವಾದಿರಾಜರ ಭಾವಿಸಮೀರತ್ವ : ಒಂದು ಸಮಾಲೋಚನೆ

ಶ್ರೀ ವಾದಿರಾಜರ ಋಜುತ್ವ ಹಾಗೂ ಭಾವೀ ಸಮೀರತ್ವವು 'ಸ್ವಪ್ನವೃಂದಾವನಾಖ್ಯಾನ' ಎಂಬ ಗ್ರಂಥದ ಮೂಲಕ, ಅವರು ವೃಂದಾವನಸ್ಥರಾದ ೧೫ ವರ್ಷಗಳ ಅನಂತರ (ಕ್ರಿ.ಶ.ಸು. ೧೬೧೫) ಬೆಳಕಿಗೆ ಬಂದಿತು. ಅವರು ಮಹಾಮಹಿಮರೂ ಇಷ್ಟಸಿದ್ಧಿಪ್ರದರೂ ಎಂಬ ಮಾತು ನೆಲೆಗೊಂಡಿತ್ತಾದ್ದರಿಂದ ಪ್ರತಿಯೊಬ್ಬ ಮಾಧ್ವರು ಥಟ್ಟನೆ ಅವರ ಋಜುತ್ವವನ್ನು ನಂಬಿದರು.

ಉತ್ತರಾದಿ ಮಠದ ಪೀಠಸ್ಥರಾಗಿದ್ದ ಶ್ರೀ ವಿದ್ಯಾಧೀಶತೀರ್ಥರು (೧೬೧೯-೧೬೩೧) ಶ್ರೀ ವಾದಿರಾಜರ ಕೃಪೆಯಿಂದಲೇ ಮುಂದೆ ಬಂದವರು. ಅನಂತರದ ಶ್ರೀ ಸತ್ಯಧರ್ಮತೀರ್ಥರಂತೂ (೧೭೯೭-೧೮೧೯) ಋಜುತ್ವ ಮಂಡಕರೇ ಆಗಿ ಶ್ರೀ ವಾದಿರಾಜರನ್ನು ಕುರಿತು ಚಿಕ್ಕ ಕೃತಿಯನ್ನು ರಚಿಸಿದರು.

ಆದರೆ ಕ್ರಿ.ಶ.೧೮೮೭ರಲ್ಲಿ ಆ ಮಠದ ಶ್ರೀ ಸತ್ಯವೀರತೀರ್ಥರ ಕಾಲದಲ್ಲಿ ಅವರಿಗೂ ಆಗಿನ ಸೋದೆ ಮಠದ ಸ್ವಾಮಿಗಳಿಗೂ ಬೇರೊಂದು ಕಾರಣದಿಂದ ಮನಸ್ತಾಪವುಂಟಾಯಿತು. ಭಾವೀಸಮೀರತ್ವದ ವಿರುದ್ಧ ದನಿ ಎದ್ದುದು ಆವಾಗ. "ಶ್ರೀ ವಾದಿರಾಜಪ್ರಣೀತ ಯಾವುದೇ ಕ್ರಮಗಳನ್ನು ಅನುಸರಿಸಬಾರದು; ಉಲ್ಲಂಘಿಸಿದವರಿಗೆ ಬಹಿಷ್ಕಾರ ಹಾಕಲಾಗುವುದು" ಎಂಬ ಆಜ್ಞೆ ಮಠದಿಂದ ಹೊರಟಿತು. ಈ ಪ್ರತಿರೋಧವು ಶ್ರೀ ಸತ್ಯಧೀರತೀರ್ಥರ ಕಾಲದವರೆಗೆ (೧೯೦೬) ಮುಂದುವರಿದು ಸ್ತಬ್ಧವಾಯಿತು.

ಈಚೆಗೆ ವೃಂದಾವನಸ್ಥರಾದ ಅದೇ ಉತ್ತರಾದಿಮಠದ ಶ್ರೀ ಸತ್ಯಪ್ರಮೋದತೀರ್ಥರ ತಾಯಿ ಸೋದೆಗೆ ಹೋಗಿ ಸೇವೆ ಮಾಡಿದ್ದರ ಫಲವಾಗಿ ಇವರು ಜನಿಸಿದ್ದರಿಂದ, ವಾದಿರಾಜ ನಿಮಿತ್ತದ 'ಗುರುರಾಜ' ಎಂದೇ ಅವರಿಗೆ ಹೆಸರಿಡಲಾಗಿದ್ದಿತು. ಆ ಮುಂದೆ ಪೀಠಸ್ಥರಿದ್ದಾಗ, ಒಂದು ಚಾತುರ್ಮಾಸವನ್ನು ಅವರು ಸೋದೆಯಲ್ಲಿಯೆ ಕಳೆದವರಲ್ಲದೆ

ಶ್ರೀ ವಾದಿರಾಜರ ಖ್ಯಾತಿವೆತ್ತ 'ಯುಕ್ತಿಮಲ್ಲಿಕಾ' ಗ್ರಂಥಕ್ಕೆ ವಿದ್ವತ್ಪೂರ್ಣವಾದ ವ್ಯಾಖ್ಯಾನವನ್ನು ಬರೆದರು. ಅದು ಪ್ರಕಟವಾಗಿದೆ.

ಅಂತೂ ೧೯೦೬ರಿಂದ ಹಲವಾರು ದಶಕಗಳ ಕಾಲ ಪರಿಸ್ಥಿತಿ-ಶಾಂತವಾಗಿದ್ದದ್ದು ಬೆಂಗಳೂರಲ್ಲಿ ೧೯೬೯ರ ಸುಮಾರಿಗೆ ಋಜುತ್ವದ ವಿರುದ್ಧ ದನಿ ಎದ್ದಿತು. ಆದರೆ ಬಲು ಬೇಗ ನಿಂತಿತು. ಈಗ ಮತ್ತೆ ಹತ್ತು - ಹದಿನೈದು ವರ್ಷಗಳ ಹಿಂದೆ ರಾಣಿಬೆನ್ನೂರು ಮತ್ತಿತರ ಕಡೆಗಳಲ್ಲಿ ಪುನಃ ಗಲಾಟೆ ನಡೆಯಿತು.

ಕಳೆದ ೧೨೦ ವರ್ಷಗಳಿಂದ ಆಗಾಗ ಈ ವಿವಾದದ ಧೂಳು ಎದ್ದಿದ್ದರೂ ಸಾಮಾನ್ಯ ಮಾಧ್ವರು ಇದಾವುದನ್ನು ಗಣನೆಗೆ ತಂದುಕೊಂಡಂತಿಲ್ಲ, ಎಂದರೆ ಸೋದೆಗೆ ಹೋಗಿಬರುತ್ತಲೇ ಇದ್ದಾರೆ. ಎಲ್ಲರಿಗೂ ಭಾವಿಸಮೀರತ್ವ ಮನವರಿಕೆ ಆಗಿರಲಿ ಆಗದೇ ಇರಲಿ, ಶ್ರೀ ವಾದಿರಾಜರ ವಿಷಯವಾಗಿ ಕಿಂಚಿತ್ತೂ ಭಕ್ತ್ಯಾದರ ಭಾವವು ಕಡಿಮೆ ಆಗಿಲ್ಲ. ಇದರ ವ್ಯಂಗ್ಯವೆಂದರೆ, ಸೋದೆಗೆ ಹೋಗುತ್ತಿರುವವರಲ್ಲಿ ಅತಿ ಹೆಚ್ಚಿನ ಸಂಖ್ಯೆಯವರು ಉತ್ತರಾದಿಮಠದವರೇ. ಅವರುಗಳು ತಮ್ಮ ಮನೆಯಲ್ಲಿ ಶ್ರೀ ವಾದಿರಾಜರ ಚಿತ್ರವಿರಿಸಿ ಅದಕ್ಕೆ ಕೈ ಮುಗಿಯುವುದು; ಅವರು ರಚಿಸಿದ 'ಪಾಲಯಾಚ್ಯುತ ಪಾಲಯಾಜಿತ' ಎಂಬ ಕೃಷ್ಣಾಷ್ಟಕವನ್ನು ಪಠಿಸುವುದು, ಹೆಣ್ಣುಮಕ್ಕಳು ವಾದಿರಾಜ ವಿರಚಿತ 'ಲಕ್ಷ್ಮೀ ಶೋಭಾನ'ವನ್ನು ಹಾಡುವುದು; ಇದಾವುದನ್ನೂ ಕೈಬಿಟ್ಟಿಲ್ಲ. ತಾತ್ಪರ್ಯ, ಅವರು ಭಾವಿಸಮೀರರಲ್ಲ ಎಂದು ಹೇಳಹೊರಟ ಯಾವುದೇ ಪ್ರಯತ್ನಕ್ಕೆ ಫಲಶ್ರುತಿ ಎಂಬುದು ಇಲ್ಲ ಎನ್ನಬೇಕಾಗುತ್ತದೆ.

ಇದರ ಕಾರಣವೆಂದರೆ ಮಾಧ್ವಮಠಗಳು ಮೂವತ್ತಕ್ಕೂ ಮೇಲ್ಪಟ್ಟು ಇದ್ದರೂ, ಮಾಧ್ವ ಪರಂಪರೆಯಲ್ಲಿ ಶ್ರೀ ಜಯತೀರ್ಥರು, ಶ್ರೀ ವ್ಯಾಸರಾಯರು, ಶ್ರೀ ವಾದಿರಾಜರು ಮತ್ತು ಶ್ರೀ ರಾಘವೇಂದ್ರರು ಸಮಸ್ತ ಮಾಧ್ವರಿಗೆ ಏಕಪ್ರಕಾರವಾಗಿ ವಂದನೀಯರು. ಅದರಲ್ಲಿಯೂ ಶ್ರೀ ವಾದಿರಾಜರು ಮತ್ತು ಶ್ರೀ ರಾಘವೇಂದ್ರರು ಮಾಧ್ವರಿಗೆ ಎರಡು ಕಣ್ಣುಗಳಿದ್ದಂತೆ. ಅವರ ವೃಂದಾವನಗಳಿರುವ ಸೋದೆ, ಮಂತ್ರಾಲಯಗಳಿಗೆ ಮೇಲಿಂದ ಮೇಲೆ ಹೋಗುವವರ ಸಂಖ್ಯೆ ಹೆಚ್ಚುತ್ತಲೇ ಇದೆ. ಉತ್ತರಾದಿಮಠದ ಈಗಿನ ಶ್ರೀಗಳವರು ಎರಡು ವರ್ಷಗಳ ಹಿಂದೆ ಅಚಾನಕವಾಗಿ ಮಂತ್ರಾಲಯಕ್ಕೆ ಹೋಗಿ ಶ್ರೀ ರಾಘವೇಂದ್ರರ ದರ್ಶನ ಪಡೆದು ಬಂದದ್ದರ, ಕಾರಣ ಶ್ರೀ ರಾಘವೇಂದ್ರರು ಯಾವುದೇ ಮಠೀಯ ಮಿತಿಗೆ ಒಳಪಡದ

ಮಹಿಮಾತಿಶಯರು ಎಂಬುದೇ ಆಗಿದೆ. ಈ ಮಾತು ಶ್ರೀ ವಾದಿರಾಜರ ವೃಂದಾವನಕ್ಕೂ ಅನ್ವಯಿಸುತ್ತದೆ.

ಅವಶ್ಯವಾಗಿ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ ಯತಿಶ್ರೇಷ್ಠರಾದವರ ಪೂರ್ವಾಪರಗಳನ್ನು ತಾರ್ಕಿಕ ವಾದದಿಂದಾಗಲೀ, ಗ್ರಂಥಗಳನ್ನು ಉದ್ಧರಿಸುವುದರಿಂದಾಗಲೀ ನಿರ್ಣಯಿಸುವುದು ಸಾಧ್ಯವಿಲ್ಲ; ಸಾಧುವೂ ಅಲ್ಲ (ನದೀ ಮೂಲ, ಋಷಿ ಮೂಲ ಇವನ್ನು ಅರಸಿ ಹೋಗಬಾರದೆಂಬ ನಾಣ್ಣುಡಿಯೇ ಇದೆ). ಶ್ರೀ ಮಧ್ವಾಚಾರ್ಯರನ್ನುಳಿದರೆ ಯಾವ ಯತಿಗಳೂ ತಾವು ಈ ಹಿಂದೆ ಇಂಥಿಂಥವರಿದ್ದೆವು ಎಂದು ಹೇಳಲಿಲ್ಲ. ಆದರೂ ಒಂದು ಅವ್ಯಕ್ತ ಅಂತಃಪ್ರೇರಣೆಯಿಂದ ನಾವುಗಳೇ "ಇವರು ರುದ್ರಾಂಶರು" 'ಅವರು ಇಂದ್ರಾಂಶರು' ಎಂದೆಲ್ಲ ಎಣಿಸುತ್ತೇವೆ. ಅರ್ಥಾತ್ ಅವತಾರದ ವಿಷಯವು ಭಾವನಾತ್ಮಕವಾದ ಶ್ರದ್ಧೆಯ ವಿಷಯವಾಗುವುದಲ್ಲದೆ ತಾರ್ಕಿಕ, ಇಲ್ಲವೆ ಲೌಕಿಕ ನ್ಯಾಯಕ್ಕೆ ಒಳಪಡುವಂತಹದಲ್ಲ. ಆದ್ದರಿಂದ ಅವರವರ ಶ್ರದ್ಧೆ–ನಂಬಿಕೆಗೆ ಅನುಸಾರವಾಗಿ ಅವರವರು ನಡೆದುಕೊಳ್ಳುವುದು ಸಹಜ. ಹಾಗಿರುವುದರಿಂದ ಭಾವಿಸಮೀರತ್ವವನ್ನು ಒಪ್ಪದವರು ಶ್ರೀ ವಾದಿರಾಜರ ಉಸಾಬರಿಗೆ ಹೋಗುವುದೇಕೆ? ಈ ಹಿಂದೆ ಭಾವಿಸಮೀರತ್ವದ ಕುರಿತು ಸಾಕಷ್ಟು ಚರ್ಚೆ ನಡೆದು ಅಂತಿಮ ಫಲಿತಾಂಶ ಹೊರಡದೇ ಇದ್ದಾಗ, ಜನಸಾಮಾನ್ಯರ ಮೇಲೆ ಏನೂ ಪರಿಣಾಮವಾಗದೇ ಇದ್ದಾಗ, ಯಾಕೆ ಇದೆಲ್ಲ?

ಕಳೆದ ಶತಮಾನದಲ್ಲಿ ಜಾಲೀಹಾಳ ಶ್ರೀನಿವಾಸಾಚಾರ್ಯರೆಂಬ ಪಂಡಿತರು ಆಗಿಹೋದರು. ಒಂದು ಸಭೆಯಲ್ಲಿ ತಮ್ಮ ಪ್ರವಚನ ಮುಗಿಸಿದಾಗ ಓರ್ವರು. "ಶ್ರೀ ವಾದಿರಾಜರು ಭಾವಿಸಮೀರರೆಂದು ಹೇಳುತ್ತಾರೆ, ನಿಮ್ಮ ಅಭಿಪ್ರಾಯವೇನು?" ಎಂದು ಕೇಳಿದರು. ಅವರ ಉತ್ತರವನ್ನು ಕೇಳಿಸಿಕೊಂಡವರಲ್ಲಿ ನಾನೂ ಒಬ್ಬ.

"ಶ್ರೀ ವಾದಿರಾಜರು ಮಧ್ವಮತಕ್ಕೆ ಸಲ್ಲಿಸಿದ ಸೇವೆ ಅಪಾರವಾದದ್ದು, ಅವರ ಮಹೋಪಕಾರ ಇಷ್ಟೇ ಎಂದು ಹೇಳಲು ಸಲ್ಲ. ಯಾವ ಕಾಲಕ್ಕೂ ನಮಗೆ ಪ್ರಾತಃಸ್ಮರಣೀಯರು. ಅಂಥ ಮಹಾಮಹಿಮರು ಪೂರ್ವದಲ್ಲಿ ಏನಾಗಿದ್ದರು. ಮುಂದೆ ಏನಾಗುವರು ಎಂಬುದನ್ನು ಕರಾರುವಕ್ಕಾಗಿ ಹೇಳುವ ಇಲ್ಲವೆ ನಿರ್ಣಯಿಸುವ ಯೋಗ್ಯತೆ ನಮಗಾರಿಗೂ ಇಲ್ಲ. ಅವರು ಭಾವಿ ಸಮೀರರು ಆಗಿರಬಹುದು, ಆಗಿರಲಿಕ್ಕೂ ಇಲ್ಲ ಅವರವರಿಗೆ ತಿಳಿದಂತೆ ನಂಬಲಿ!"

ಪ್ರಶ್ನೆ ಕೇಳಿದ ವ್ಯಕ್ತಿ ಅಲ್ಲಿಗೆ ಬಿಡದೇ "ನಾನು ನಂಬುತ್ತೇನೆ ಎಂದು ತಿಳಿಯಿರಿ. ಎಷ್ಟೋ ಎಷ್ಟೋ ಯುಗಗಳು ಕಳೆದ ಮೇಲೆ ವಾಯುದೇವರ ಸ್ಥಾನಕ್ಕೆ ಬರುತ್ತಾರೆ ಎಂಬುದನ್ನು ಒಪ್ಪುವ. ಆದರೆ ಈಗೇ ಯಾಕೆ ಈ ಬಗ್ಗೆ ಅತಿಯಾಗಿ ಹಟತೊಟ್ಟು ಪ್ರಚಾರ ಮಾಡುತ್ತಾರೆ?"

ಅದಕ್ಕೆ ಆಚಾರ್ಯರು ಮುಗುಳು ನಗೆಯಲ್ಲಿ ಹೇಳಿದರು "ಅವರನ್ನೇ ಕೇಳಿರಿ!"

ಏನಿದ್ದರೂ ಅವರ ಆಪ್ತ ಪರಿಚಯದವರಿಗೆ ಆಚಾರ್ಯರು ಆಂತರ್ಯದಲ್ಲಿ ಶ್ರೀ ವಾದಿರಾಜೀಯ ಭಾವಿಸಮೀರತ್ವವನ್ನು ನಂಬಿದ್ದರಲ್ಲದೆ ಅದರ ಸಂಕೇತವಾದ ಮೃತ್ತಿಕೆಯನ್ನು ಬೆಳಗ್ಗೆ ಹಚ್ಚಿಕೊಳ್ಳುತ್ತಿದ್ದರು. ಇಳಿವಯದಲ್ಲಿ ಬಿಟ್ಟರೆಂದು ಕಾಣುತ್ತದೆ.

ಈ ತಿಕ್ಕಾಟದ ಒಂದು ವ್ಯಂಗ್ಯವೆಂದರೆ, ಸುಮಾರು ೫೦-೬೦ ವರ್ಷಗಳ ಹಿಂದಿನ ಉತ್ತರಾದಿ ಮಠದ ಹಲವು ಪಂಡಿತರು ಈ ಭಾವಿಸಮೀರತ್ವವನ್ನು ಮನಸಾ ಒಪ್ಪಿದವರು. ಆದರೆ ಪ್ರವಚನದ ಪ್ರಸಂಗ ಬಂದಾಗ, 'ನೆರೆದ ಶ್ರೋತೃಗಳಲ್ಲಿ ಅದನ್ನು ಪ್ರಸ್ತಾಪಿಸಿದಾಗ ವಿರೋಧ ಬಂದೀತೆ?' ಎಂದು ಯೋಚಿಸುತ್ತಿದ್ದರು.

ಇನ್ನು ಈ ವಿವಾದದಿಂದುಂಟಾದ ದುಷ್ಪರಿಣಾಮಗಳನ್ನು ಅವಶ್ಯವಾಗಿ ಗಮನಿಸತಕ್ಕದ್ದು. ಒಂದನೆಯದು, ಊರಿಂದೂರಿಗೆ ಹರಡುತ್ತಿರುವ ಸುಳ್ಳು ವದಂತಿಗಳು. ನಡೆದ ಒಂದು ಅಲ್ಪ ಘಟನೆಗೆ ಉಪ್ಪುಕಾರ ಹಚ್ಚಿ ತಮ್ಮ ನಿಲುಮೆಗನುಸಾರ ಇನ್ನೊಬ್ಬರಿಗೆ ಹೇಳುತ್ತ ಹೋಗುವುದು. "ಸ್ವಾಮಿಗಳನ್ನು ಹೊಡೆಯಲು ಹುಬ್ಬಳ್ಳಿಯಿಂದ ಎರಡು ಬಸ್ ತುಂಬ ಜನ ಹೋದರು" "ಸ್ವಪ್ನ-ವೃಂದಾವನಾಖ್ಯಾನ"ದ ಪ್ರತಿಯನ್ನು ಪ್ರತಿಭಟನಾರ್ಥ ಸುಟ್ಟುಹಾಕಿದರು". ".... ಸ್ವಾಮಿಗಳನ್ನು ಏಕವಚನದಿಂದ ಹೀನಾಮಾನವಾಗಿ ಬೈದರು", ಇತ್ಯಾದಿ ಸುಳ್ಳು ಸುದ್ದಿಗಳನ್ನು ಹರಡುವುದು ಮಾನವ ಸ್ವಭಾವವೇ ಆಗಿದ್ದರೂ ಅದರ ದುಷ್ಪರಿಣಾಮ ಮಾತ್ರ ಕೆಟ್ಟದ್ದು.

ನಿಜಸಂಗತಿ ತಿಳಿಯದೇ, ಸಾಮಾನ್ಯ ಮಾಧ್ವರಿಗೆ ಇದರಿಂದ ಅತೀವ ಕಿರಿಕಿರಿಯಾಗುತ್ತದೆ. ಪ್ರತೀಕಾರ ಭಾವನೆ ಮೂಡುತ್ತದೆ. ಶ್ರೀ ವಾದಿರಾಜರ ಬಗ್ಗೆ ಆಂತರ್ಯದಲ್ಲಿ ಅವರಿಗೆ ಗುರುಭಕ್ತಿ ಇರುವುದರಿಂದ "ಯಾಕಾದರೂ ಈ ಪಂಡಿತರು ಇಂಥ ಚರ್ಚೆ-ಬೈದಾಟಗಳಿಗೆ ತೊಡಗುತ್ತಾರೆ?' ಎಂದು ಮನಸ್ಸು ರೋಸಿಗೊಳ್ಳುತ್ತದೆ.

ಮತ್ತೊಂದು ಪರಿಣಾಮ, ಇಡೀ ಮಾಧ್ವ ಸಮುದಾಯಕ್ಕೆ ಹಾನಿಕರವಾದದ್ದು, ಹಿಂದಿನ ಕಾಲದಲ್ಲಿ ಮಠ-ಮಠಗಳ ನಡುವೆ ಆಗಾಗ ಜಗಳಗಳು ನಡೀತಾನೇ ಇದ್ದವು. ಒಮ್ಮೊಮ್ಮೆ ಬ್ರಿಟಿಶ್ ಕೋರ್ಟುಗಳ ಕಟ್ಟೆ ಹತ್ತಿ, ಯಾವುದೊಂದು ನಿರ್ಣಯವಾಗಿ ಪ್ರಕರಣ ಅಲ್ಲಿಗೇ ಮುಗಿಯುತ್ತಿತ್ತು. ಈಗ ಹಾಗಲ್ಲ. ಒಂದಲ್ಲ ಹಲವಾರು ಪತ್ರಿಕೆಗಳ ಮೂಲಕ, ಮಾಧ್ವರ ಇಂಥ ಜಗಳಗಳೂ ಅದಕ್ಕೆ ಸಂಬಂಧಿಸಿದ ವ್ಯಕ್ತಿಗಳ ಸ್ವಪ್ರತಿಷ್ಠೆಯ ಹೇಳಿಕೆಗಳೂ ಧಾರಾಳವಾಗಿ ಪ್ರಕಟವಾಗುತ್ತವೆ.

ಪರಿಣಾಮ? ಮಾಧ್ವರೆಂದರೆ 'ಜಗಳಗಂಟರು' ಎಂಬ ಹಣೆಪಟ್ಟಿ! ಕೇವಲ ಈಚೆಗೆ ಮಂತ್ರಾಲಯ ಪೀಠ ವಿವಾದ, ಶ್ರೀ ನರಹರಿತೀರ್ಥರ ವೃಂದಾವನದ ಹಕ್ಕುದಾರಿಕೆ ಇವೆಲ್ಲ ಕಾಣಿಸಿಕೊಂಡು ಸಂಬಂಧಪಟ್ಟವರು ಕೋರ್ಟಿಗೆ ಎಡತಾಕಿದರಷ್ಟೇ. ಇತರರು ಮಾಧ್ವರನ್ನು 'ತಂಟೆಖೋರರು' ಎಂದು ಹಂಗಿಸುವಾಗ ಸಮಾಜದಲ್ಲಿ ಮಾಧ್ವರ ಪ್ರತಿಷ್ಠೆ ಎಲ್ಲಿ ಉಳಿಯಿತು? ಮಾಧ್ವರಿಗಿಂತ ಎಷ್ಟೋ ಹೆಚ್ಚಿನ ಸಂಖ್ಯೆಯಲ್ಲಿರುವ ಸ್ಮಾರ್ತರೊಳಗೆ ಈ ಬಗೆಯ ಧರ್ಮದ ಹೆಸರಿನ ತಿಕ್ಕಾಟ ತೀರ ಕಡಿಮೆ ಎಂಬುದನ್ನು ಲಕ್ಷ್ಯದಲ್ಲಿಡಬೇಕು. ಅದೇಕೆ, ಮಾಧ್ವರೇ ಆದ ಒಬ್ಬರು "ನಮ್ಮ ಮಠಗಳವರಿಗೆ ಏಕಾದಶಿಯ ನಿರ್ಣಯವನ್ನು ಒಮ್ಮತದಿಂದ ಮಾಡುವುದಾಗಿಲ್ಲ. ಶ್ರೀ ರಾಘವೇಂದ್ರ ಗುರುಗಳಿಗೆ ಒಬ್ಬರು ಆ ದಿನ ಉಪವಾಸ ಇಟ್ಟರೆ ಇನ್ನೊಬ್ಬರು ಅದೇ ದಿನ ದ್ವಾದಶಿಯ ಪಾರಣೆ ಮಾಡಿಸುತ್ತಾರೆ. ಮಧ್ಯದ ನಮ್ಮಂತಹ ಸಾಮಾನ್ಯರು ಏನು ಮಾಡಬೇಕು?" ಎಂದು ಬೇಸರದಿಂದ ನುಡಿದಿದ್ದರು.

ಇಂದಿನ ದಿನಗಳಲ್ಲಿ ಸಮಾಜದ ವಿವಿಧ ವರ್ಗಗಳೊಡನೆ ಹೊಕ್ಕು-ಬಳಕೆ ಮೊದಲಿಗಿಂತ ಹೆಚ್ಚಾಗಿದೆ. ತಂತಮ್ಮ ಅಸ್ತಿತ್ವ ವಿಚಾರದಲ್ಲಿ ಜಾಗೃತಿ ಎಲ್ಲೆಡೆ ಮೂಡಿದೆ. ಇಂಥ ಸ್ಥಿತಿಯಲ್ಲಿ ಮಾಧ್ವರು ತಲೆ ಎತ್ತಿ ನಿಲ್ಲಲಾಗದಿದ್ದರೂ ತಲೆ ತಗ್ಗಿಸುವಂತೆ ಆಗಬಾರದು. ಮಠಾಧಿಪತಿಗಳ ಸುತ್ತಲಿನ ಪರಿವಾರಕ್ಕೆ ಇಂಥ ಜಗಳಗಳಿಂದ ಹಾನಿ ಕಂಡು ಬರಲಿಕ್ಕಿಲ್ಲ. ಆದರೆ ಸ್ವಮತದಲ್ಲಿ ಅಭಿಮಾನವಿಟ್ಟುಕೊಂಡು ಲೌಕಿಕ ಜೀವನ ನಡೆಸುವ ಸಹಸ್ರ-ಸಹಸ್ರಾರು ಜನರಿಗೆ ಮಾತ್ರ ತುಂಬಾ ಅನ್ಯಾಯವಾಗುತ್ತಿದೆ. ಇವರುಗಳು ತಂತಮ್ಮ ಗುರುಪೀಠಕ್ಕೆ ಗೌರವ ಸಲ್ಲಿಸುತ್ತಿದ್ದರೂ ಮಠಗಳು ದಾರಿ ತಪ್ಪಿ ನಡೆದವರೆಂದು ಅನ್ನಿಸಿದರೆ ದೂರ ಸಿಡಿದು ನಿಲ್ಲಬಹುದೆಂಬುದನ್ನು ಸಂಬಂಧಪಟ್ಟವರು ತಿಳಿದಿರುವುದೊಳಿತು.

ಒಟ್ಟಿನ ಸಮಾಜದಲ್ಲಿ ಬ್ರಾಹ್ಮಣರು ಅಲ್ಪ ಸಂಖ್ಯೆಯವರು. ಅವರಲ್ಲಿ ಮಾಧ್ವರು ಇನ್ನೂ ಅಲ್ಪಸಂಖ್ಯಾತರು. ಈ ಕಾರಣದಿಂದ ಪರಸ್ಪರ ಸೌಹಾರ್ದದ ಆವಶ್ಯಕತೆ ತುಂಬಾ ಇದೆ. ಜಗಳದ ಪ್ರಸ್ತಾಪವಂತೂ ಬರಲೇಕೂಡದು. ಪ್ರಕೃತದ ಸಂದರ್ಭದಲ್ಲಿ ಉಭಯ ಮಠಗಳ ಶ್ರೀಗಳವರಿಬ್ಬರೇ ಸೇರಿ ಸಮಾಲೋಚಿಸಬೇಕು. ಶ್ರೀ ವಾದಿರಾಜರ ಋಜುತ್ವ ನಿರ್ಣಯಕ್ಕಲ್ಲ; ತಂತಮ್ಮ ಶಿಷ್ಯರುಗಳನ್ನು ಸುಮ್ಮನಿರಿಸುವ ಬಗ್ಗೆ ಇಂಥ ವಾತಾವರಣವನ್ನು ನಿರ್ಮಿಸುವ ಸೂಕ್ತಕ್ರಮ ಕೈಗೊಳ್ಳಬೇಕು.

ಬೆಂಗಳೂರು — ಶ್ರೀನಿವಾಸ ಹಾವನೂರ
೨೦೦೩

## ಶ್ರೀ ವಾದಿರಾಜ ಮೃತ್ತಿಕಾ ವೃಂದಾವನ ಮಠ, ಹಾವನೂರ

### ಪ್ರಕಟಣೆಗಳು

೧. ಹರಿದಾಸರು ಸ್ತುತಿಸಿದ ಶ್ರೀ ಸತ್ಯಬೋಧರು. ೨೦೦೧
೨. ಸೋದೆಮಠದ ಶ್ರೀ ವಿಶ್ವೇಂದ್ರತೀರ್ಥರ 'ಕೀರ್ತನ ಮಂಜರಿ' ೨೦೦೧
೩. ಹರಿದಾಸರು ಸ್ತುತಿಸಿದ ಮಂತ್ರಾಲಯ ಮಠದ ಯತಿವರೇಣ್ಯರು*
೪. Sri Vadiraja Tirtua of Sode Matha* ೨೦೦೭
೫. ಶ್ರೀ ವಾದಿರಾಜರ 'ತೀರ್ಥಪ್ರಬಂಧ' – ಕಾವ್ಯಾತ್ಮಕ ಸಮೀಕ್ಷೆ – ೨೦೦೮
೬. ಹರಿದಾಸರು ಹಾಡಿ ಹೊಗಳಿದ ಶ್ರೀ ವಾದಿರಾಜರು (೨ನೇ ವಿಸ್ತಾರಿತ ಆವೃತ್ತಿ) ೦೨ ಮಾರ್ಚ್ ೨೦೧೦.

* ಈ ಗುರುತಿನ ಪುಸ್ತಕ ಪ್ರತಿಗಳು ತೀರಿವೆ.

# ಒಪ್ಪೋಲೆ

(ಸೂಚನೆ: ಸಾಲನ್ನು ಎಣಿಸುವಾಗ ಪುಸ್ತಕದ ಹೆಸರು ಮತ್ತು ಕೀರ್ತನೆಗಳ ಕ್ರಮ ಸಂಖ್ಯೆ ಇರುವ ಸಾಲುಗಳನ್ನು ಗಣನೆಗೆ ತೆಗೆದುಕೊಂಡಿಲ್ಲ)

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| xiii | 10 | ಮುದ್ರಿಕೆಯನ್ನು | ಮುದ್ರಿಕೆಯಲ್ಲಿ |
| xiv | 21 | ಭೂವರಹನು | ಭೂವರಾಹನು |
| xiv | 25 | ತಾಯಿಯದರಕೆ | ತಾಯಿಯ ಹರಕೆ |
| xv | 3 | ವಿಷಯ | ವಿಜಯ |
| xviii | 7 | ಜಯಶೇವಿಠಲ | ಜಯೇಶವಿಠಲ |
| xviii | 8 | ವೆಂಕಟರಮಣಾಚಾರ್ಯರು | ವೆಂಕಟರಾಯರು |
| xviii | 14 | ಬಾಟ್ಲಿ | ಬಾಟ್ನಿ |
| xxi | 24 / 25 | ಕುಮಾರಿ ಶ್ರೀಮತಿ ಗೀತಾ | ಕುಮಾರಿ ಗೀತಾ |
| xxii | 9 | ೨೭ | ೨೭, ೮೨ |
| xxiii | 4 | ೫೦, ೯೫ | ೧೪, ೫೦, ೯೫ |
| xxiii | 17 | (ಸಾಲನ್ನು ತೆಗೆದುಹಾಕಬೇಕು) | |
| 33 | 16 | ಕುಂದುಕಂಠ | ಕಂದುಕಂಠ |
| 38 | 11 | ಚರಣದೊಲೂಳಿಗ | ಚರಣದೂಳಿಗ |
| 38 | 22 | ಸೋದಾ | ಸೋಂದಾ |
| 39 | 4 | ಪರಚರಣ | ಪದಶರಣ |
| 73 | 11 | ಆದದರಿಂದ | ಆದರದಿಂದ |
| 83 | 10 | ತುರಗಾಶ್ವ | ತುರಗಾಸ್ಯ |
| 84 | 8 | ತಿಳಿದು | ತಿಳಿದ |
| 86 | 1 | ವಾಲಿ | ಪಾಲಿ (?) |
| 92 | 2 | ಜಗದೀ | ಜಗದೀ......ಪ. |
| 92 | 3 | ನಿನ್ನ ಪಾದ | ನಿನ್ನ |
| 92 | 4 | ಸೇವೆಯೊಳಿಟ್ಟು | ಪಾದ ಸೇವೆಯೊಳಿಟ್ಟು |
| 92 | 4 | ನಮಿಪೆ....ಪ. | ನಮಿಪೆ...... ಅ.ಪ. |
| 92 | 9 | ತಂದೆಣಿಸಿ | ತಂದೆ ಯೆಣಿಸಿ |
| 92 | 9 | ದಣಿಸಿದರ | ದಣಿಸಿದರೆ |
| 93 | 12 | ಹಯವದನೆನ್ನ | ಹಯವದನನ್ನ |
| 97 | 2 | ಹರಕಾರ್ಯ | ಹರಿಕಾರ್ಯ |

ಹರಿದಾಸರು ಹೊಗಳಿ ಹಾಡಿದ ಶ್ರೀ ವಾದಿರಾಜರು

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| 101 | 2 | ನೇಮಿಸಿ | ಸೇವಿಸಿ |
| 101 | 3 | ವೇದವ್ಯಾಸ ಮುಂದೆ | ವೇದವ್ಯಾಸರ ಮುಂದೆ |
| 106 | 3 | ಹಯಕ್ತ್ರನಿಗೆ | ಹಯವಕ್ತ್ರನಿಗೆ |
| 109 | 14 | ಸಮಲಕ್ಷ | ಸುಮಲಕ್ಷ |
| 109 | 18 | ಪದ್ಮಾಗುಟಜೆಯ | ಪದ್ಮಾಂಗುಟಜೆಯ |
| 112 | 10 | ವಿಠಲಪಿಯ | ವಿಠಲಪ್ರಿಯ |
| 114 | 5 | ಪಾದ ಭಜಿಸಿ | ಪಾದವ ಭಜಿಸಿ |
| 114 | 16 | ಸ– | ಸನ್ಯಾಸ ರತ್ನನ |
| 114 | 17 | ನ್ಯಾಸ ರತ್ನನ | (ಹಿಂದಿನ ಸಾಲಿಗೆ ಸೇರಬೇಕು) |
| 114 | 20 | ತಂದೆವೆಂಕಟೇಶ | ಮಹಿತ ತಂದೆವೆಂಕಟೇಶ |
| 115 | 15 | ವಾಸುದೇವನ | ವಸುದೇವನ |
| 118 | 14 | ಭಜಿಸಿರೋ | ಭಜಿಸಿರೋ...................ಪ. |
| 118 | 15 | ನಿಮಗೆ.......ಪ. | ನಿಮಗೆ |
| 120 | 2 | ಬಿಡಿಸಿಲ್ಲಿಯ | ಬಿಡಿಸಿಲಿಯ |
| 128 | 25 | ದೊರೆಯ | ದೊರೆಯೆ |
| 132 | 9 | ಧೊರೆಯ | ಧೊರೆಯೆ |
| 135 | 10 | ಭಂಗಿಸದೆ | ಭಂಗಿಸಿದೆ |
| 138 | 1 | ತುಂತುರರು | ತುಂಬುರರು |
| 138 | 23 | ಕುಂದೆಣಿಸದಾಗದೋ | ಕುಂದೆಣಿಸಲಾಗದೋ |
| 140 | 3 | ಭುಜಗಣಸ್ಥರಾ | ಋಜುಗಣಸ್ಥರಾ |
| 153 | 1 | ಕಂಸಾದಿಮುಖ | ಕಂಸಾದಿಮುಖ |
| 162 | 9 | ಅಂಜನದಿಂದೊಂದಿತ | ಅಂಜನನಿಂದೊಂದಿತ |
| 164 | 21 | ನಿಂದೊಂದಿತ | ನೀನೊಂದಿತ |
| 164 | 24 | ಪತಿಯಾಗುವನಿಂದೊಂದಿತ | ಪತಿಯಾಗುವಿಯೆಂದೊಂದಿತ |
| 165 | 14 | ಕೊಂಡಾದಿರೆಸಗೆ | ಕೊಡಾದಿರೆನೆಗೆ |
| 167 | 20 | ವಿಠ್ಠಲರೇಯ | ವಿಠ್ಠಲಪ್ರಿಯ (?) |
| 169 | 14 | ಕಂಣು | ಕಣ್ಣು |
| 170 | 11 | ಭಾರಿ | ಭಾವಿ |
| 170 | 12 | ರಾಮಧ್ಯಾನಿ | ರಾಮಧ್ಯಾನ |
| 170 | 12 | ವಾಮನ | ವಾಮ |
| 170 | 13 | ಮರುತದ | ಮರುತಮತದ |
| 188 | 15 | Tirtua | Tirtha |

ಈ ಸಂಕಲನದಲ್ಲಿ...

- ಶ್ರೀ ವಾದಿರಾಜ ಯತಿಗಳವರ ಮೇಲೆ, ೬೦ ಜನ ವಿವಿಧ ಹರಿದಾಸರು ರಚಿಸಿದ ೧೪೫ ಹಾಡುಗಳಿವೆ.

- ಅವರಲ್ಲಿ ಅರ್ಧದಷ್ಟು ಹರಿದಾಸರು ಹಾಗೂ ಅವರ ೮೦ಕ್ಕೆ ಮಿಕ್ಕಿದ ಹಾಡುಗಳು ಮೊದಲ ಬಾರಿಗೆ ಬೆಳಕಿಗೆ ಬಂದಿದೆ.

- ಉಕ್ತರಾದ ಹರಿದಾಸರಲ್ಲಿ ಸೋದೆಮಠದ ಶ್ರೀ ವಿಶ್ವೇಂದ್ರತೀರ್ಥರದು (ರಾಜನಾಥ–ರಾಜೇಶ ಹಯಾಸ್ಯ) ಎದ್ದು ಕಾಣುವ ಹೆಸರು. ನಾಲ್ವರು ದಾಸ ಮಹಿಳೆಯರಿರುವುದು ಒಂದು ವಿಶೇಷ. ಅಲ್ಲದೆ ಓರ್ವ ವೀರಶೈವರ ಹಾಡು ಇರುವುದು ಇನ್ನೊಂದು ವಿಶೇಷದ ಸಂಗತಿ.

- ಬಂದಿರುವ ಹಾಡುಗಳಲ್ಲಿ 'ದಂಡಕ' ಪ್ರಕಾರದ ಸಾಮೂಹಿಕ ಭಜನೆಗೆ ಅನುಕೂಲಿಸುವ ದೀರ್ಘ ಪದರಚನೆಗಳಿವೆ.

- ಭೂತರಾಜರನ್ನು ಕುರಿತ ಪ್ರತ್ಯೇಕ ಹಾಡುಗಳಿವೆ.

- ಶ್ರೀ ವಾದಿರಾಜರ ಪ್ರಭಾವ ಯಾವ ರೀತಿ ಹಬ್ಬಿದೆಯೆನ್ನುವುದರ ಬಗ್ಗೆ ಸಂಶೋಧನಾತ್ಮ ಪ್ರಬಂಧವಿದೆ.

- ಶ್ರೀ ವಾದಿರಾಜರ ಭಾವಿಸಮೀರತ್ವದ ಕುರಿತು ಸಮಾಲೋಚನೆಯಿದೆ.